# ಪೇಜಾವರ ಪ್ರಶಸ್ತಿ

(ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಜೀವನ ಸಾಧನೆಗಳ ಸಮೀಕ್ಷೆ)

ಸಂಪಾದಕರು

ಹೆರಂಜೆ ಕೃಷ್ಣ ಭಟ್ಟ

ಮುರಳೀಧರ ಉಪಾಧ್ಯ, ಹಿರಿಯಡಕ

ಪ್ರಕಾಶಕರು

ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಪೀಠಾರೋಹಣ ವಜ್ರ ಮಹೋತ್ಸವ ಸಮಿತಿ

ಪೂರ್ಣಪ್ರಜ್ಞ ವಿದ್ಯಾಪೀಠ

ಬೆಂಗಳೂರು – ೫೬೦ ೦೨೮

PEJAVARA PRASHASTHI: Life and Achievements of Shri Vishwesha Theertha Swamiji of Sri Pejavara Matha, Udupi. Published on the occasion of the "Diamond Jubilee" celeberation of taking up the life of consecration and taking charge of the Sri Pejavara Matha. Edited by Heranje Krishna Bhat and Muraleedhara Upadhya, Hiriadka, 1999.

PP : 770 + 32 + 48 (Photo Pages)



COVER DESIGN:

Conception : Ramesh Rao

Art work : Shailesh Kotian

Photo : Yajna, Mangalore

Printed at Manipal Power Press, Manipal 576 119

'ಪೇಜಾವರ ಪ್ರಶಸ್ತಿ'ಯಲ್ಲಿ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಚಿಕಣ ಆತ್ಮಕತೆ ಹಾಗೂ ಮಹಾ ಪರಂಪರೆಯ ಧಾರ್ಮಿಕ ಗ್ರಂಥಗಳ ಕುರಿತು ಅವರು ಬರೆದಿರುವ ೩೪ ಲೇಖನಗಳಿವೆ. ಶ್ರೀ ವಿಶ್ವೇಶತೀರ್ಥರ ಜೀವನ, ಸಾಧನೆ, ವ್ಯಕ್ತಿತ್ವ, ಸಾಮಾಜಿಕ - ರಾಜಕೀಯ ನಿಲುವುಗಳ ಕುರಿತು, ದ. ರಾ. ಬೇಂದ್ರೆ, ಗೌರೀಶ ಕಾಯ್ಕಿಣಿ, ಕು. ಶಿ. ಹರಿದಾಸ ಭಟ್ಟ, ಪಾ. ವೆಂ. ಆಚಾರ್ಯ, ಡಾ। ಎಂ. ಪ್ರಭಾಕರ ಜೋಶಿ, ಲಕ್ಷ್ಮೀಶ ತೋಳ್ಪಾಡಿ, ಬನ್ನಂಜೆ ಗೋವಿಂದಾಚಾರ್ಯ, ಪಂಡರೀನಾಥಾಚಾರ್ಯ ಗಲಗಲಿ, ಪ್ರೊ। ಪಿ. ಶ್ರೀಪತಿ ತಂತ್ರಿ, ರಾಜಾರಾಮ ತೋಳ್ಪಾಡಿ, ಪಾಟೀಲ ಪುಟ್ಟಪ್ಪ, ಕೆ. ಕೆ. ಪೈ, ಏರ್ಯ ಲಕ್ಷ್ಮೀನಾರಾಯಣ ಆಳ್ವ, ಡಾ। ಸಿ. ಎಚ್. ಶ್ರೀನಿವಾಸ ಮೂರ್ತಿ, ಎ. ಹರಿದಾಸ ಭಟ್ ಮತ್ತಿತರ ವಿದ್ವಾಂಸರು ಬರೆದಿರುವ ಎಪ್ಪತ್ತು ಲೇಖನಗಳು ಈ ಗ್ರಂಥದಲ್ಲಿವೆ. 'ಗೋವಿಂದ ಪೈ ಸಂಶೋಧನ ಸಂಪುಟ' ಖ್ಯಾತಿಯ ಪ್ರೊ। ಹೆರಂಜೆ ಕೃಷ್ಣ ಭಟ್ಟ ಹಾಗೂ ಪ್ರೊ। ಮುರಳೀಧರ ಉಪಾಧ್ಯ, ಹಿರಿಯಡಕ ಈ ಗ್ರಂಥದ ಸಂಪಾದಕರು.

# ಅನುಕ್ರಮಣಿಕೆ



## ೪. ಶ್ರೀ ವಿಶ್ವೇಶತೀರ್ಥರ ಪರ್ಯಾಯಗಳು

ಡಾ। ಡಿ. ವೀರೇಂದ್ರ ಹೆಗ್ಗಡೆ

# ವಿಚಿತ್ರ ಚೇತನ

ಗುಣೇಷು ಕ್ರಿಯತಾಂ ಯತ್ನಃ ಕಿಮಾಟೋಪೈಃ ಪ್ರಯೋಜನಂ ವಿಕ್ರೀಯಂತೇ ನ ಘಂಟಾಭಿಃ ಗಾವಃ ಕ್ಷೀರವಿವರ್ಜಿತಾಃ – ಎಂಬ ಸುಭಾಷಿತದಂತೆ ಮನುಷ್ಯ ತನಗೆ ಯೋಗ್ಯವಾದ ಗುಣಗಳನ್ನು ಸಂಪಾದಿಸಲು ಪ್ರಯತ್ನಿಸಬೇಕು. ಬರಿಯ ಆಡಂಬರದಿಂದ ಪ್ರಯೋಜನವೇನು ? ಹಾಲು ಹಿಂಡುವ ಹಸುವಿನ ಘಂಟೆಯೂ ಶಬ್ದ ಮಾಡುತ್ತದೆ. ಹಾಲಿಲ್ಲದ ಹಸುವಿನ ಗಂಟೆಯೂ ಶಬ್ದ ಮಾಡುತ್ತದೆ. ಹಸುವನ್ನು ಕೊಳ್ಳಲು ಬಂದವರಿಗೆ ಈ ಶಬ್ದ ಮುಖ್ಯವಲ್ಲ. ಆ ಹಸು ಎಷ್ಟು ಹಾಲು ಕೊಡುತ್ತದೆ ಎಂಬುದನ್ನು ನೋಡಿ ಅದಕ್ಕೆ ಬೆಲೆ ಕಟ್ಟುತ್ತಾರೆ. ಘಂಟಾನಾದವು ಅಧಿಕವಾದ ಮಾತ್ರಕ್ಕೆ ಆ ಹಸುವಿನ ಬೆಲೆ ಅಧಿಕವಾಗುವುದಿಲ್ಲ.

ಹಾಗೇ ಮನುಷ್ಯನಿಗೆ ಕೀರ್ತಿ-ಗೌರವಗಳು ಬರುವುದು ಆತನ ಯೋಗ್ಯತೆಯಿಂದ. ಬರಿಯ ಹೊರಗಿನ ವೇಷ ಅಥವಾ ಪ್ರಚಾರದಿಂದಲ್ಲ. ಚಿನ್ನಕ್ಕಾಗಲೀ, ವಜ್ರಕ್ಕಾಗಲೀ ಇರುವ ಬೆಲೆ ಅವುಗಳ ಪ್ರಚಾರದಿಂದ ಬಂದದ್ದಲ್ಲ. ಬದಲಾಗಿ ಶ್ರೇಷ್ಠತೆಯಿಂದ ಬಂದದ್ದಾಗಿದೆ. ಹಸುವನ್ನು ಕೊಳ್ಳಬಯಸುವವನು ಹಸುವಿನ ಹಾಲು ಹಿಂಡಿ ಅಲ್ಲಿ ಆಗಲೇ ಅದರ ಅರ್ಹತೆಯನ್ನು, ಬೆಲೆಯನ್ನು ನಿರ್ಣಯಿಸುತ್ತಾನೆ. ಆದರೆ ಬರಿಯ ಪ್ರಚಾರದಿಂದ ಮೇಲೇರಿದ ವ್ಯಕ್ತಿಯ ನಿಜವಾದ ಮೌಲ್ಯವನ್ನು ನಿರ್ಧರಿಸಲು ಸರಿಯಾದ ಸಾಧನಗಳೇ ಇಲ್ಲ.

ಪೇಜಾವರ ಶ್ರೀಗಳು ಅನೇಕ ಸಂದರ್ಭಗಳಲ್ಲಿ ನಾನು ಒಂದು ಹಸು ಎಂಬುದಾಗಿ ಹೇಳಿಕೊಂಡದ್ದುಂಟು. ಅವರು ಬರಿಯ ಘಂಟಾನಾದದಿಂದ ಜನರನ್ನು ಆಕರ್ಷಿಸುವ ಹಸುವಲ್ಲ. ಬದಲಾಗಿ ತನ್ನ ಸದಾಚಾರ, ಸತ್ಕರ್ಮ, ನಿಷ್ಕಲ್ಮಶ ಹೃದಯಪೂರ್ಣ ಪ್ರವಚನಗಳೆಂಬ ಅಮೃತವನ್ನು ತನ್ನ ಕೊಡಗೆಚ್ಚಲಿನಲ್ಲಿ ತುಂಬಿಕೊಂಡು ಎಲ್ಲಾ ತರದ ಜನರನ್ನು ಆಕರ್ಷಿಸುತ್ತಿರುವ 'ಸಾತ್ವಿಕ ಗೋವು' ಎಂದರೆ ತಪ್ಪಾಗದು. ತಾನಿರುವ ಸಮಾಜದ ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಕಾರ್ಯಗಳೆಲ್ಲದರಲ್ಲಿ ಭಾಗಿಯಾಗುತ್ತಾ, ತನ್ನ ಮಾತು ಮತ್ತು ಕೃತಿಯ ಮೂಲಕ ಜನಮನವನ್ನು ಮುಟ್ಟಿರುವ, ಮುಟ್ಟುತ್ತಿರುವ ಸಂತರಲ್ಲಿ ಶ್ರೀ ವಿಶ್ವೇಶತೀರ್ಥರು ಅದ್ವಿತೀಯರೆಂದರೆ ತಪ್ಪಾಗದು.

ಜನೋಪಯೋಗಿಯಾಗಿ ವಿಭೂತಿ ಎನಿಸುತ್ತದೆ. ಹಾಗೆ ಸರ್ವ ಜನೋಪಯೋಗಿ ವ್ಯಕ್ತಿಗಳೂ ವಿಭೂತಿ ಪುರುಷರೆನಿಸುತ್ತಾರೆ. ಹಣ್ಣಿನ ಸಿಪ್ಪೆಗೆ ಬಣ್ಣ ಬಂದಾಗಲೇ ಅದರೊಳಗಿನ ರಸಕ್ಕೆ ಸಿಹಿ, ಮಾಧುರ್ಯ ಉಂಟಾಗುತ್ತದೆ. ಶ್ರೀಗಳವರ ಪಟ್ಟಾಧಿಕಾರ ಸ್ವರ್ಣಮಹೋತ್ಸವದಲ್ಲಿ ಅವರ ವ್ಯಕ್ತಿತ್ವದ ಪೂರ್ಣತೆ, ಪಕ್ವತೆ, ಮಾಧುರ್ಯಗಳು ಬಳಿ ಬಂದವರನ್ನು ಹಸನಾಗಿಸುತ್ತಿದೆ. ●

**ಹೆರಂಜೆ ಕೃಷ್ಣ ಭಟ್ಟ, ಮುರಲೀಧರ ಉಪಾಧ್ಯ ಹಿರಿಯಡಕ**

# ಸಂಪಾದಕೀಯ

ಶ್ರೀ ವಿಶ್ವೇಶತೀರ್ಥರು ಪೇಜಾವರ ಸ್ವಾಮಿಗಳೆಂದೇ ಪ್ರಸಿದ್ಧರು. ಶ್ರೀ ವಿಶ್ವೇಶತೀರ್ಥರ ಜೀವನ-ಸಾಧನೆಗಳ ಅಧ್ಯಯನ, ಸಮೀಕ್ಷೆ ಈ ಗ್ರಂಥದ ಉದ್ದೇಶ. ಈ ಗ್ರಂಥದ ಯೋಜನೆಯನ್ನು ಆರಂಭಿಸಿದಾಗ ನಾವು ಸಿದ್ಧಪಡಿಸಿದ ರೂಪರೇಷೆ ಸ್ಥೂಲವಾಗಿ ಹೀಗಿತ್ತು: (೧) ಶ್ರೀ ವಿಶ್ವೇಶತೀರ್ಥರ ಸುದೀರ್ಘ ಸಂದರ್ಶನವೊಂದನ್ನು ದಾಖಲಿಸುವುದು, ಚಿಕ್ಕ ಆತ್ಮಕಥನವೊಂದನ್ನು ಬರೆಯುವಂತೆ ಅವರನ್ನು ವಿನಂತಿಸುವುದು. (೨) ಶ್ರೀ ವಿಶ್ವೇಶತೀರ್ಥರು ಉಪನಿಷತ್ತುಗಳು, ಭಗವದ್ಗೀತೆ ಹಾಗೂ ಶ್ರೀಮಧ್ವಚಾರ್ಯರ 'ತತ್ತ್ವವಾದ'ವನ್ನು ಕುರಿತು ಬರೆದಿರುವ ಕೆಲವು ಲೇಖನಗಳನ್ನು ಸಂಕಲಿಸುವುದು. (೩) ಶ್ರೀ ವಿಶ್ವೇಶತೀರ್ಥರ ಈವರೆಗಿನ ಮೂರು ಪರ್ಯಾಯಗಳ ಸಾಧನೆಗಳನ್ನು ದಾಖಲಿಸುವುದು. (೪) ಶ್ರೀ ವಿಶ್ವೇಶತೀರ್ಥರ ವ್ಯಕ್ತಿತ್ವ, ಸಾಮಾಜಿಕ-ರಾಜಕೀಯ ನಿಲುವುಗಳನ್ನು ಕುರಿತು ಈಗಾಗಲೇ ವಿವಿಧ ಸ್ಮರಣ ಸಂಚಿಕೆಗಳಲ್ಲಿ ಪ್ರಕಟವಾಗಿರುವ ಕೆಲವು ಅಸಾಧರಣ ಲೇಖನಗಳನ್ನು ಆಯ್ಕೆಮಾಡುವುದು. (೫) ಶ್ರೀ ವಿಶ್ವೇಶತೀರ್ಥರ ಜೀವನ ಸಾಧನೆಗಳನ್ನು ಕುರಿತು ತಜ್ಞರಿಂದ ಕೆಲವು ಲೇಖನಗಳನ್ನು ಬರೆಸುವುದು. (೬) ಶ್ರೀ ವಿಶ್ವೇಶತೀರ್ಥರು ನೀಡಿರುವ ಕೆಲವು ಮಹತ್ವದ ಸಂದರ್ಶಗಳನ್ನು ಸಂಕಲಿಸುವುದು. (೭) ಶ್ರೀ ವಿಶ್ವೇಶತೀರ್ಥರ ಮಾರ್ಗದರ್ಶನದಲ್ಲಿ ನಡೆಯುತ್ತಿರುವ ಸಂಸ್ಥೆಗಳ ಮಾಹಿತಿ ಸಂಗ್ರಹಿಸಿ, ಅವುಗಳನ್ನು ಪರಿಚಯಿಸುವುದು. (೮) ಶ್ರೀ ವಿಶ್ವೇಶತೀರ್ಥರ ಬಹುಮುಖಿ ವ್ಯಕ್ತಿತ್ವವನ್ನು ಪರಿಚಯಿಸುವ ಛಾಯಾಚಿತ್ರಗಳನ್ನು ಸಂಕಲಿಸುವುದು. ಸಂಸ್ಥೆಗಳ ಮಾಹಿತಿ ಸಂಗ್ರಹದ ಕೆಲಸ ನಮಗಿದ್ದ ಕಾಲ ಮಿತಿಯಿಂದಾಗಿ ಅಪೂರ್ಣವಾಗಿದೆ. ನಮ್ಮ ಇತರ ಉದ್ದೇಶಗಳು ಈಡೇರಿವೆ ಎಂಬ ತೃಪ್ತಿ ನಮಗಿದೆ.

**ಒಸ್ನೋಲಿ**

'ಪೇಜಾವರ ಪ್ರಶಸ್ತಿ'ಯ ಮೊದಲ ಭಾಗದಲ್ಲಿ ಉಡುಪಿಯ ಅಷ್ಟಮಠಗಳು ಹಾಗೂ ಪೇಜಾವರ ಮಠವನ್ನು ಕುರಿತು ಆರು ಲೇಖನಗಳಿವೆ. ಕಡಿಯಾಳಿ ವಾದಿರಾಜ ಉಪಾಧ್ಯಾಯರ

‘ಅಷ್ಟಮಠದ ಹೆಸರಾಂತ ಯತಿಗಳು’ ಹಾಗೂ ಮೆಕೆಂಝಿ ಸಂಪುಟದ ‘ಪೇಜಾವರ ಮಠದ ಕೈಫಿಯತ್ತು’ ಕುತೂಹಲಕಾರಿ ಸಂಗತಿಗಳನ್ನು ತಿಳಿಸುತ್ತವೆ. ಪೇಜಾವರ ಮಠದ ಯತಿಗಳು ಉಡುಪಿಯ ಗಡಿದಾಟಿ, ದೇಶದ ಉದ್ದಗಲದಲ್ಲಿ ಸಂಚಾರ ಮಾಡುತ್ತಿದ್ದರೆಂಬುದನ್ನು ಕೈಫಿಯತ್ತು ದೃಢೀಕರಿಸುತ್ತದೆ. ಬನ್ನಂಜೆ ಗೋವಿಂದಾಚಾರ್ಯರ ‘ಆಧ್ಯಾತ್ಮಿಕ ಪ್ರಪಂಚಕ್ಕೆ ಉಡುಪಿಯ ಕೊಡುಗೆ’ ಹಾಗೂ ‘ಪೇಜಾವರ ಮಠದ ಗುರುಪರಂಪರೆ, ಒಂದು ಹೊಸ ಬೆಳಕು’ ಈ ವಿಭಾಗದ ಮುಖ್ಯ ಲೇಖನಗಳು. ಪೇಜಾವರ ಮಠ ಆರ್ಥಿಕವಾಗಿ ದುರ್ಬಲವಾಗಿದ್ದ ಉಡುಪಿ ಮಠಗಳಲ್ಲೊಂದಾಗಿತ್ತು. ಎಸ್. ಯು. ಪಣಿಯಾಡಿಯವರ ಸಪ್ಲೈ ಏಜೆನ್ಸಿ (ಲಿ.) ೧೯೩೮ರಲ್ಲಿ ಉಡುಪಿ ‘ಪರ್ಯಾಯಮ್ ಸೊವೆನಿರ್’ನ್ನು ಪ್ರಕಟಿಸಿತ್ತು. ಕತೆಗಾರ ಕೊರಡ್ಕಲ್ ಶ್ರೀನಿವಾಸರಾಯರು ಇದರ ಸಂಪಾದಕರಾಗಿದ್ದರು. ಈ ಸ್ಮರಣ ಸಂಚಿಕೆಯ ಮುಖಪುಟದಲ್ಲಿ ‘‘ಪೇಜಾವರ ಮಠದ ನೂರು ರೂಪಾಯಿ ಬೆಲೆಯ ‘ಪರ್ಯಾಯ ಪ್ರಾಮಿಸರಿ ನೋಟು’ಗಳನ್ನು ಕೊಳ್ಳಿರಿ’’ ಎಂದು ವಿನಂತಿಸುವ ಜಾಹೀರಾತು ಪ್ರಕಟವಾಗಿದೆ.

## ‘ಕೊಟ್ಟ ಕುದುರೆಯನೇರಿ ಗಡಿದಾಟಿದವರು’

ಎಂ. ನಾರಾಯಣಾಚಾರ್ಯ-ಕಮಲಮ್ಮ ಈ ದಂಪತಿಗಳ ಮಗನಾಗಿ, ಪ್ರಜಾಪತಿ ಸಂ।ದ ವೈಶಾಖಶುದ್ಧ ಪಂಚಮಿಯಂದು ಸೋಮವಾರ (೨೭-೪-೧೯೩೧), ಸುಬ್ರಹ್ಮಣ್ಯ ಸಮೀಪದ ರಾಮಕುಂಜದಲ್ಲಿ ಜನನ . ಬಹುಧಾನ್ಯ ಸಂ।ರದ ಮಾರ್ಗಶಿರ ಶುದ್ಧ ಪಂಚಮಿ, ಶುಕ್ರವಾರ (೩-೧೨-೧೯೩೮) ಪೇಜಾವರ ಮಠದ ಶ್ರೀ ವಿಶ್ವಮಾನ್ಯತೀರ್ಥರಿಂದ ಸನ್ಯಾಸದೀಕ್ಷೆ ಪಡೆದು ಶ್ರೀ ವಿಶ್ವೇಶತೀರ್ಥರಾದದ್ದು. ಬಾರ್ಕೂರಿನ ಭಂಡಾರಕೇರಿ ಮಠದಲ್ಲಿ ಶ್ರೀ ವಿದ್ಯಾಮಾನ್ಯತೀರ್ಥರ ಶಿಷ್ಯರಾಗಿ ಎಂಟು ವರ್ಷಗಳ ಕಾಲ ವಿದ್ಯಾಭ್ಯಾಸ. ನಿತ್ಯೋತ್ಸವ ಎಂಬಂತೆ ನಡೆಸಿದ ಮೂರು ಪರ್ಯಾಯಗಳು: ೧೯೫೨-೫೪; ೧೯೬೮-೧೯೭೦; ೧೯೮೪-೮೬; ೧೯೫೩ರಲ್ಲಿ ಅಖಿಲ ಭಾರತ ಮಾಧ್ವ ಮಹಾಮಂಡಲದ ಸ್ಥಾಪನೆ; ‘ಗೀತಾಸಾರೋದ್ಧಾರ’ ಕೃತಿ ರಚನೆ (೧೯೬೮). ಭಂಡಾರಕೇರಿ ಮಠದ ಶ್ರೀ ವಿದ್ಯಾಮಾನ್ಯತೀರ್ಥರನ್ನು ಪಲಿಮಾರು ಮಠದ ಅಧಿಪತಿಗಳಾಗಿ (೧೯೬೯) ನೇಮಿಸುವಲ್ಲಿ ಮಹತ್ವದ ಪಾತ್ರ; ಬನ್ನಂಜೆ ಗೋವಿಂದಾಚಾರ್ಯರು ಸಂಪಾದಿಸಿದ ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳ ಪ್ರಕಟಣೆಗೆ ಪ್ರೋತ್ಸಾಹ; ಬೆಂಗಳೂರಿನಲ್ಲಿ ಪೂರ್ಣಪ್ರಜ್ಞ ವಿದ್ಯಾಪೀಠದ ಸ್ಥಾಪನೆ (೧೯೫೬), ಪಾಜಕ ಪ್ರತಿಷ್ಠಾನದ ಸ್ಥಾಪನೆ (೧೯೮೦), ಆನಂದತೀರ್ಥ ಪ್ರತಿಷ್ಠಾನದ ಸ್ಥಾಪನೆ. ‘ಪಂಡಿತ ಪೋಷಣಾ ನಿಧಿ’ ಸ್ಥಾಪನೆ (೧೯೯೦) ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪೂರ್ಣಪ್ರಜ್ಞ ಸಂಶೋಧನ ಮಂದಿರ ಆರಂಭ (೧೯೯೪) ಶ್ರೀ ವಿದ್ಯಾಮಾನ್ಯ ಪ್ರಶಸ್ತಿ ಹಾಗೂ ಶ್ರೀ ವಿಶ್ವೇಶತೀರ್ಥ ಪ್ರಶಸ್ತಿ ಕೊಡುವ ವ್ಯವಸ್ಥೆ; ಬೆಂಗಳೂರಿನ ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠದಿಂದ ಮಧ್ವಾಚಾರ್ಯರ ಸರ್ವ ಮೂಲ ಗ್ರಂಥಗಳ ಕನ್ನಡ ಭಾಷಾಂತರ ಪ್ರಕಟಣೆ. ಹದಿನೇಳು ಸುಧಾ ಮಂಗಲೋತ್ಸವಗಳು; ಉಡುಪಿಯಲ್ಲಿ ಶ್ರೀಕೃಷ್ಣ ಉಚಿತ ಚಿಕಿತ್ಸಾಲಯದ ಆರಂಭ (೧೯೬೮). ಬೆಂಗಳೂರಿನ ಮಲ್ಲೇಶ್ವರಂ ಬಡಾವಣೆಯ ದಲಿತರ ಕಾಲೋನಿಯಲ್ಲಿ ಪಾದಯಾತ್ರೆ, (೧೯೭೦). ಆಂಧ್ರಪ್ರದೇಶದಲ್ಲಿ ಚಂಡಮಾರುತದ ಹಾವಳಿಗೊಳಗಾದವರಿಗಾಗಿ ಹಂಸಲದಿವಿ ಗ್ರಾಮದಲ್ಲಿ ೧೫೦ ಮನೆಗಳನ್ನು ನಿರ್ಮಿಸಿಕೊಟ್ಟದ್ದು (೧೯೭೮). ಕರ್ಜಗಿಯಲ್ಲಿ ವೃದ್ಧಾಶ್ರಮ ಸ್ಥಾಪನೆ; ಭೂಕಂಪ ಪೀಡಿತ ಗೋವಿಂದಪುರದಲ್ಲಿ

ಅರುವತ್ತು ಮನೆಗಳ ವಿತರಣೆ (೧೯೯೫), ಸುಮಾರು ಅರುವತ್ತು ವಿವಿಧ ಶಿಕ್ಷಣ ಸಂಸ್ಥೆಗಳು, ಆಸ್ಪತ್ರೆಗಳು, ಕಲ್ಯಾಣ ಮಂಟಪಗಳು, ವಿದ್ಯಾರ್ಥಿ ವಸತಿಗೃಹಗಳ ಸ್ಥಾಪನೆಗೆ ಮಾರ್ಗದರ್ಶನ. ಇವು ಶ್ರೀ ವಿಶ್ವೇಶತೀರ್ಥರ ಜೀವನದ ಮಹತ್ವದ ಘಟನೆಗಳಲ್ಲಿ ಕೆಲವು.

ಈ ಗ್ರಂಥದ ಎರಡನೆಯ ಭಾಗದಲ್ಲಿ ಶ್ರೀ ವಿಶ್ವೇಶತೀರ್ಥರು ನಮ್ಮ ವಿನಂತಿಯನ್ನು ಒಪ್ಪಿ ಬರೆದುಕೊಟ್ಟಿರುವ ಒಂದು ಚಿಕಣಿ ಆತ್ಮಕಥನವಿದೆ. ಬಾಲ್ಯದ ನೆನಪುಗಳು, ಮಠದ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯ ಅನುಭವ, ಎರಡನೆಯ ಮಹಾಯುದ್ಧದ ಗಾಯಾಳುಗಳ ಶುಶ್ರೂಷೆಗೆ ಹೋಗಬೇಕೆಂದು ಕನಸು ಕಂಡದ್ದು, ಗಾಂಧೀಜಿಯವರ ಪ್ರಭಾವ, ಮಾಧ್ವ ಮಹಾಮಂಡಲದ ಸ್ಥಾಪನೆಗೆ ಪಟ್ಟ ಶ್ರಮ, ದಲಿತರು ಅನುಭವಿಸುವ ಅವಮಾನದ ಪ್ರತ್ಯಕ್ಷ ಅನುಭವ, 'ಸಮಾಜದಲ್ಲಿ ಸಮುದ್ರ ಮಂಥನಕ್ಕೆ ಕಾರಣವಾದ' ಹರಿಜನಕೇರಿ ಭೇಟಿ, ವಾಕ್ಯಾರ್ಥಗಳು, ತುರ್ತುಪರಿಸ್ಥಿತಿಯ ಪ್ರತಿಭಟನೆ, ಪರಿಸರ ಚಳವಳಿ, ರಾಮಜನ್ಮಭೂಮಿ ಪ್ರಕರಣದ ಕೆಲವು ತೆರೆಮರೆಯ ಸಂಗತಿಗಳು- ಪಂಜಾಬಿನ ಶಾಂತಿಯಾತ್ರೆ, ಗೋಕಾಕ್ ಚಳವಳಿಗೆ ಬೆಂಬಲ ಇವುಗಳ ಕುರಿತು ಸ್ವಾಮೀಜಿಯವರು ವಿವರವಾಗಿ ಬರೆದಿದ್ದಾರೆ.

ಬಾಲ್ಯದ ನೆನಪುಗಳನ್ನು ಬರೆಯುತ್ತ ಶ್ರೀ ವಿಶ್ವೇಶತೀರ್ಥರು, "ನಾನು ಗಾಂಧೀಜಿಯವರ ವಿಚಾರಕ್ಕೆ ಸಂಬಂಧಿಸಿದ ಪತ್ರಿಕೆಗಳು ಮತ್ತು ಪುಸ್ತಕಗಳನ್ನು ತರಿಸಿ ಓದುತ್ತಿದ್ದೆ. ಗಾಂಧೀಜಿಯವರ 'ಹರಿಜನ' ಪತ್ರಿಕೆಯ ಕನ್ನಡ ಅನುವಾದಗಳು, ಗಾಂಧೀಜಿ, ವಿನೋಬಾ, ಮಶ್ರೂವಾಲಾ, ಕುಮಾರಪ್ಪ ಮುಂತಾದವರ ಲೇಖನಗಳನ್ನು ಓದುತ್ತಿದ್ದೆ. ವಿಕೇಂದ್ರೀಕರಣ ಹಾಗೂ ಗ್ರಾಮೋದ್ಯೋಗಿಗಳಿಗೆ ಒತ್ತುಕೊಡುತ್ತಿದ್ದ ಗಾಂಧೀಜಿಯವರ ಆರ್ಥಿಕ ವಿಚಾರಗಳ ಬಗ್ಗೆ ನನ್ನ ಒಲವು ಬೆಳೆದಿತ್ತು. ಇದರ ಜೊತೆಗೆ ಜಯಪ್ರಕಾಶ, ಲೋಹಿಯಾ, ಆಚಾರ್ಯ ನರೇಂದ್ರದೇವ ಮುಂತಾದವರ ಸಮಾಜವಾದಿ ವಿಚಾರಗಳಿಂದಲೂ ಪ್ರಭಾವಿತನಾಗಿದ್ದೆ. ಶ್ರೀಮಂತರ ಹಾಗೂ ಬಡವರ ಆರ್ಥಿಕ ಅಂತರವು ಬಹಳಷ್ಟು ಕಡಿಮೆಯಿರಬೇಕು. ಜನರ ಆರ್ಥಿಕ ಸಮಾನತೆಯನ್ನು ಸಾಧಿಸಬೇಕೆಂಬ ತೀವ್ರ ಕಳಕಳಿಯು ನನ್ನಲ್ಲಿ ಬಾಲ್ಯದಿಂದಲೂ ಬೆಳೆದುಕೊಂಡು ಬಂದಿತ್ತು" (೨-೧) ಎಂದಿದ್ದಾರೆ.

'ಕೊಟ್ಟ ಕುದುರೆಯನೇರಿ ಗಡಿದಾಟಿದ' ಪೇಜಾವರ ಸ್ವಾಮೀಜಿಯವರ ಕನಸು-ನನಸುಗಳನ್ನು ಲಕ್ಷ್ಮೀಶ ತೋಳ್ಪಾಡಿಯವರು ವಿವರಿಸಿದ್ದಾರೆ (೨-೩).

## 'ನಾನಾ ಜನಸ್ಯ ಶುಶ್ರೂಷಾ'

ಶ್ರೀ ವಿಶ್ವೇಶತೀರ್ಥರು, ಉಪನಿಷತ್ತುಗಳು, ಭಗವದ್ಗೀತೆ ಹಾಗೂ ಮಧ್ವಾಚಾರ್ಯರ ವಿವಿಧ ಗ್ರಂಥಗಳ ಕುರಿತು ಬರೆದಿರುವ ಮೂವತ್ತೊಂದು ಲೇಖನಗಳು ಈ ಗ್ರಂಥದಲ್ಲಿವೆ. ಅವರು ಉಪನಿಷತ್ತುಗಳು ಹಾಗೂ ಭಗವದ್ಗೀತೆಯ ಸಾರಾಂಶವನ್ನು ನೀಡಿರುವುದಲ್ಲದೆ ಮಾಧ್ವ ಸಿದ್ಧಾಂತದ ನೆಲೆಯಿಂದ ಅವುಗಳನ್ನು ವ್ಯಾಖ್ಯಾನಿಸಿದ್ದಾರೆ. ಗಂಭೀರ ತಾತ್ವಿಕ ಜಿಜ್ಞಾಸೆಯಿರುವ ಸಂಸ್ಕೃತ ಗ್ರಂಥಗಳನ್ನು ಕನ್ನಡದಲ್ಲಿ ಪಾರಿಭಾಷಿಕ ಶಬ್ದಗಳ ಭಾರವಿಲ್ಲದೆ, ವಾಗಾಡಂಬರವಿಲ್ಲದೆ ಸರಳವಾಗಿ ಹೇಗೆ ಪರಿಚಯಿಸಬಹುದೆಂಬುದಕ್ಕೆ ಈ ಲೇಖನಗಳು ಮಾದರಿಯಾಗಿವೆ. ಮಧ್ವಾಚಾರ್ಯರ 'ತತ್ತ್ವವಾದ'ವನ್ನು ಶ್ರೀ ವಿಶ್ವೇಶತೀರ್ಥರು ಹೀಗೆ ಪರಿಚಯಿಸುತ್ತಾರೆ- "ಸಕಲ ವೇದಗಳಿಂದ ಪ್ರತಿಪಾದ್ಯನಾದ ಶ್ರೀ ಹರಿಯು ಸರ್ವೋತ್ತಮನಾಗಿದ್ದು, ಅವನ ಲೀಲಾವಿಹಾರ

ಕೇಂದ್ರವೂ, ಲೀಲಾತ್ಮರ ಸಾಧನ ಕ್ಷೇತ್ರವೂ ಆಗಿರುವ ಈ ಜಗತ್ತು ಸತ್ಯವಾಗಿದೆ. ಈ ಪರಾತ್ಪರ ಶಕ್ತಿಯ ಸೇವಕರೂ ಸಾಧಕರೂ ಆದ ಈ ಜೀವರು ಭಗವಂತನಿಂದ ಭಿನ್ನವಾಗಿದ್ದು ಮೂಲಭೂತವಾದ ಮತ್ತು ತನ್ನ ಕರ್ತವ್ಯಗಳಿಗೆ ಅನುಗುಣವಾಗಿ ಸ್ವಾಭಾವಿಕವಾದ ಅಂತರವನ್ನು ಪಡೆದಿರುವರು. ಭಗವಂತನ ಅನುಗ್ರಹದಿಂದ ಪರಿಶುದ್ಧ ಭಕ್ತಿಯಿಂದ ತನ್ನ ದಿವ್ಯ ಸ್ವರೂಪದ ಸಾಕ್ಷಾತ್ಕಾರವೇ ಸಾಧಕ ಜೀವರ ಗುರಿಯಾಗಿರಬೇಕು. ಈ ಪ್ರಮೇಯಗಳನ್ನು ಅಪೌರುಷೇಯ ವೇದ ಮತ್ತು ಇತರ ಶಾಸ್ತ್ರಗಳು ಹಾಗೂ ಪ್ರತ್ಯಕ್ಷ ಮತ್ತು ಯುಕ್ತಿಗಳಿಂದ ನಾವು ತಿಳಿದುಕೊಳ್ಳಬೇಕು.'' (೩-೩೦)

ಮಧ್ವಾಚಾರ್ಯರ 'ಗೀತಾತಾತ್ಪರ್ಯ'ದಲ್ಲಿರುವ ''ನಾನಾ ಜನಸ್ಯ ಶುಶ್ರೂಷಾ ಕರ್ತವ್ಯಾ ಕರವನ್ಮಿತೇಃ'' ಎಂಬ ಮಾತನ್ನು ಶ್ರೀ ವಿಶ್ವೇಶತೀರ್ಥರು ಧ್ಯೇಯವಾಕ್ಯವಾಗಿ ಸ್ವೀಕರಿಸಿದ್ದಾರೆ -''ಇದು ನಮಗೆ ಪ್ರಿಯವಾದ ಧ್ಯೇಯವಾಕ್ಯವೆನಿಸಿದೆ. ಕರ್ಮಾಚರಣೆಯು ಆವಶ್ಯಕವೆಂದು ಭಾವಿಸಿ ತಮ್ಮ ವೈಯಕ್ತಿಕ ಧರ್ಮ ಕರ್ಮಗಳನ್ನು ಮಾತ್ರ ಆಚರಿಸಿ, ಸಮಾಜದ ಬಗ್ಗೆ ಉದಾಸೀನವಾಗಿರುವ ಪ್ರವೃತ್ತಿಯನ್ನೇ ನಾವು ಹೆಚ್ಚಾಗಿ ಕಾಣುತ್ತೇವೆ. ಸಮಾಜದ ಸೇವೆಯೆಂದರೆ ಅದೊಂದು ಲೌಕಿಕ ಕಾರ್ಯವೆಂದೂ, ಅದನ್ನು ತೊರೆದು ದಿನವಿಡೀ ಜಪತಪ ಮೊದಲಾದ ವೈಯಕ್ತಿಕ ಆಧ್ಯಾತ್ಮಿಕ ಕಾರ್ಯಗಳಲ್ಲಿ ತೊಡಗುವವನೇ ಕಟ್ಟಾ ಧಾರ್ಮಿಕನೆಂದೂ ಒಂದು ಭಾವನೆಯು ಪ್ರಚಲಿತವಿದೆ. ಗೀತೆಯಲ್ಲಿ ಹೇಳಿದ ಕರ್ಮದ ಸಂದೇಶವನ್ನು ವರ್ಣಾಶ್ರಮ ಪದ್ಧತಿಯಿಂದ ಬಂದ ನಮ್ಮ ವೃತ್ತಿ ಹಾಗೂ ಜಪ ಪೂಜಾದಿಗಳಲ್ಲೇ ನಾವು ಪರಿಮಿತಗೊಳಿಸಿದ್ದೇವೆ. ನಮ್ಮ ಆಧ್ಯಾತ್ಮಿಕ ಸಾಧನೆಯಲ್ಲಿ ಆರ್ತ ಜನತೆಯ ಸೇವೆಯೂ ಒಂದು ಪ್ರಧಾನವಾದ ಅಂಶವಾಗಿದೆಯೆಂದೂ, ಸಾಧಕನು ತನ್ನ ನಿತ್ಯಾನುಷ್ಠಾನಗಳ ಜತೆಗೆ ಈ ಸೇವಾಕಾರ್ಯವನ್ನು ಆಚರಿಸಬೇಕೆನ್ನುವುದು ಗೀತೆಯ ಆದೇಶ ವೆಂದೂ ಶ್ರೀ ಮಧ್ವಾಚಾರ್ಯರು ಪ್ರತಿಪಾದಿಸಿದ್ದಾರೆ. ವೇದಾಂತವು ಸಮಾಜ ವಿಮುಖವಾದ ದೃಷ್ಟಿಯನ್ನು ನಮಗೆ ನೀಡದೆ ವೈಯಕ್ತಿಕ ಹಾಗೂ ಸಮಾಜದ ಉನ್ನತಿಗೆ ಪೋಷಕವಾದ , ವಿಧಾಯಕವಾದ ಮಾರ್ಗವನ್ನು ಹೇಗೆ ತೋರಿಸುತ್ತದೆ ಎಂಬುದನ್ನು ಇದರಿಂದ ನಾವು ಮನಗಾಣಬಹುದು.'' (೩-೨೯)

ಮಧ್ವಾಚಾರ್ಯರು ತನ್ನ ಎಲ್ಲ ಗ್ರಂಥಗಳನ್ನೂ ಸಂಸ್ಕೃತದಲ್ಲೆ ಬರೆದರು. ಸೋದೆ ಮಠದ ಶ್ರೀ ವಾದಿರಾಜ ಸ್ವಾಮಿಗಳು ಕನ್ನಡದಲ್ಲಿ ನೂರಾರು ಕೀರ್ತನೆಗಳನ್ನು ಬರೆದರು. ಉಡುಪಿಯ ಅಷ್ಟಮಠಗಳ ಇತಿಹಾಸದಲ್ಲಿ ಶ್ರೀ ವಾದಿರಾಜರ ಅನಂತರ ಕನ್ನಡಪರವಾದ ದಿಟ್ಟ ಹೆಜ್ಜೆಯಿಟ್ಟವರು ಶ್ರೀ ವಿಶ್ವೇಶತೀರ್ಥರು. ಮಧ್ವಾಚಾರ್ಯರ ಸರ್ವ ಮೂಲ ಗ್ರಂಥಗಳ ಕನ್ನಡ ಭಾಷಾಂತರಗಳನ್ನು ಮಾಡಿಸಿರುವ ಇವರು ಆ ಎಲ್ಲ ಗ್ರಂಥಗಳಿಗೆ ಕನ್ನಡದಲ್ಲಿ ಪ್ರಸ್ತಾವನೆಯನ್ನು ಬರೆದಿದ್ದಾರೆ.

ಶ್ರೀ ವಿಶ್ವೇಶತೀರ್ಥರು ತನ್ನ ಉಪನ್ಯಾಸ ಪ್ರವಚನಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತಗಳಿಂದ ಆಯ್ದ ಉಪಾಖ್ಯಾನಗಳನ್ನು ವಿವರಿಸುತ್ತಾರೆ. ಅವರ ಉಪನ್ಯಾಸಗಳಿಂದ ಆಯ್ದ ಕೆಲವು ದೃಷ್ಟಾಂತ ಕತೆಗಳು ಈ ಗ್ರಂಥದಲ್ಲಿವೆ (೩-೩೧; ೩-೩೨)

ಪೇಜಾವರ ಸ್ವಾಮೀಜಿಯವರ ಮೂರು ಪರ್ಯಾಯಗಳು ಹಾಗೂ ನೂರಾರು ಸಾಧನೆಗಳ ಸಮಗ್ರ ವಿವರಗಳು ಪಂಡರೀನಾಥಾಚಾರ್ಯ ಗಲಗಲಿ ಅವರ ಲೇಖನದಲ್ಲಿವೆ. (೪-೧). ಈ ಗ್ರಂಥದ ನಾಲ್ಕನೆಯ ಭಾಗ ಶ್ರೀ ವಿಶ್ವೇಶತೀರ್ಥರ ಪರ್ಯಾಯ ಕಾಲದ ವೈವಿಧ್ಯಪೂರ್ಣ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ದಾಖಲಿಸುತ್ತದೆ

**'ಚೈತನ್ಯದ ಬುಗ್ಗೆ'**

ಈ ಗ್ರಂಥದ ಐದನೆಯ ಭಾಗದಲ್ಲಿ ಶ್ರೀ ವಿಶ್ವೇಶತೀರ್ಥರ ಸರಳ, ನಿರಾಡಂಬರ ಹಾಗೂ ''ಚೈತನ್ಯದ ಬುಗ್ಗೆ''ಯಂಥ ವ್ಯಕ್ತಿತ್ವವನ್ನು ಕುರಿತು ಶ್ರೀ ವಿದ್ಯಾಮಾನ್ಯ ತೀರ್ಥರು, ದ. ರಾ. ಬೇಂದ್ರೆ, ಶಂ. ಬಾ. ಜೋಶಿ, ಪಾ. ವೆಂ. ಆಚಾರ್ಯ, ಕೃಷ್ಣಮೂರ್ತಿ ಪುರಾಣಿಕ, ಕೀರ್ತಿನಾಥ ಕುರ್ತಕೋಟಿ, ಮಾಲತಿ ಪಟ್ಟಣಶೆಟ್ಟಿ, ಕೆ. ಎಸ್. ದೇಶಪಾಂಡೆ, ಎಮ್. ಕೆ. ಭಾರತೀರಮಣಾಚಾರ್ಯ ಮತ್ತಿತರರು ಬರೆದಿರುವ ಹದಿಮೂರು ಲೇಖನಗಳು ಹಾಗೂ ಎರಡು ಕವನಗಳಿವೆ. ಶ್ರೀ ವಿದ್ಯಾಮಾನ್ಯ ತೀರ್ಥರ ಲೇಖನದಲ್ಲಿ ಶ್ರೀ ವಿಶ್ವೇಶತೀರ್ಥರು ಹಾಗೂ ಶ್ರೀ ವಿಜಯೀಂದ್ರಾಚಾರ್ಯರ ನಡುವೆ ನಡೆದ ಒಂದು ವಾಕ್ಯಾರ್ಥದ ವಿವರಗಳಿವೆ. (೫-೨) ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ತತ್ವಶಾಸ್ತ್ರದ ವಾಕ್ಯಾರ್ಥಗಳು ಹೇಗೆ ನಡೆಯುತ್ತಿದ್ದವು ಎಂಬುದಕ್ಕೆ ಇದೊಂದು ಮಾದರಿಯಾಗಿದೆ. ''ಶ್ರೀ ಪೇಜಾವರ ಶ್ರೀ ವಿಶ್ವೇಶತೀರ್ಥ ಮಹಾಸ್ವಾಮಿಗಳಷ್ಟು ಜಾಗೃತ ಸಾಮಾಜಿಕ ಪ್ರಜ್ಞೆಯ ಬೇರೊಬ್ಬರನ್ನು ನಾನು ಇನ್ನೂ ಕಂಡಿಲ್ಲ'' ಎಂದು ಶಂ. ಬಾ. ಜೋಶಿ ಬರೆದಿದ್ದಾರೆ. (೫-೪) ಎ. ಹರಿದಾಸ ಭಟ್ಟರ 'ಶ್ರೀಗಳವರು ಮತ್ತು ಪರಿವಾರ' ಎಂಬ ಲೇಖನ (೫-೧೫). ಶ್ರೀ ವಿಶ್ವೇಶತೀರ್ಥರ ನಿಕಟವರ್ತಿಗಳ ಸಂದರ್ಶನಗಳ ಮೂಲಕ ಅವರ ವ್ಯಕ್ತಿತ್ವದ ಆತ್ಮೀಯ, ಸಮೀಪ ಚಿತ್ರವೊಂದನ್ನು ನೀಡುತ್ತದೆ. ಜರತಾರಿಯ ಬದಲು ಖಾದಿ-ಕಾವಿ ಧರಿಸುವ ಪೇಜಾವರ ಶ್ರೀಗಳು ಪೀಠಾಧಿಪತಿಗಳ ಗುಂಪಿನಲ್ಲಿ ಪ್ರತ್ಯೇಕವಾಗಿ ಕಾಣಿಸುತ್ತಾರೆ.

ಬಿಡುವಿಲ್ಲದ ಕಾರ್ಯಕ್ರಮಗಳು ಶ್ರೀ ವಿಶ್ವೇಶತೀರ್ಥರ ದಿನಚರಿಯಲ್ಲಿ ಅನಿವಾರ್ಯ. ''ಹಳೇಹಾಳ ಒಂದು ಗ್ರಾಮ. ಪರ್ಯಾಯ ಸಂಚಾರ ಕಾಲದಲ್ಲಿ ಶ್ರೀಗಳವರು ಅಲ್ಲಿನ ಸಂದರ್ಶನಕ್ಕಾಗಿ ಕೇವಲ ಹದಿನೈದು ನಿಮಿಷಗಳನ್ನಿಟ್ಟಿದ್ದರು. ಭಕ್ತರು ಬಹಳ ಸಂಖ್ಯೆಯಲ್ಲಿ ಸೇರಿದ್ದರು. ಮೆರವಣಿಗೆಯಲ್ಲಿ ಶ್ರೀಗಳವರನ್ನು ಕರೆದೊಯ್ಯಬೇಕೆಂದು ಜನರ ಅಪೇಕ್ಷೆ. ಶ್ರೀಗಳವರು ಸಮಯವಿಲ್ಲವೆಂದು ನಿರಾಕರಿಸಿದರು. 'ತಾವು ಕಾರಲ್ಲಿ ಬನ್ನಿ. ನಾವು ನಡೆದುಕೊಂಡು ಬರುತ್ತೇವೆ' ಎಂದರು ಜನರು. 'ಅದು ನನಗೆ ಸಂಕೋಚವಾಗುತ್ತದೆ' ಎಂದು ಕೊನೆಗೂ ಶ್ರೀಗಳು ಮೆರವಣಿಗೆಗೆ ಒಪ್ಪಿದರು. ಶ್ರೀಗಳವರು ಓಡುತ್ತ ಹೋದರು. ಜನರೂ ಹಿಂದಿನಿಂದ ಓಡಿದರು. ಇದೊಂದು ರೀತಿಯ ಓಟದ ಮೆರವಣಿಗೆಯಾಯಿತು. ಹೀಗಿದೆ ಶ್ರೀಗಳವರ ಕಾರ್ಯದ ಒತ್ತಡ.'' (೫-೧೫) ಬಿಜಾಪುರದಲ್ಲಿ ಶ್ರೀ ಬಂಧನಾಳ ಶಿವಯೋಗಿಗಳು ಏರ್ಪಡಿಸಿದ್ದ ಸಮಾರಂಭದಲ್ಲಿ ನಡೆದ ಘಟನೆ ಶ್ರೀ ವಿಶ್ವೇಶತೀರ್ಥರ ಸರಳತೆಗೆ ಉದಾಹರಣೆಯಾಗಿದೆ. (೮-೮) ಮಂಗಳೂರಿನ ಸಂಮಾನ ಸಮಾರಂಭದಲ್ಲಿ ನಡೆದ ಇಂಥ ಇನ್ನೊಂದು ಘಟನೆಯ ವಿವರ ಡಾ। ಡಿ. ವೀರೇಂದ್ರ ಹೆಗ್ಗಡೆಯವರು ಈ ಗ್ರಂಥಕ್ಕೆ ಬರೆದಿರುವ ಪ್ರಸ್ತಾವನೆಯಲ್ಲಿದೆ.

**'ಒಂದು ಹೆಜ್ಜೆ ಮುಂದೆ'**

ಎಳವೆಯಲ್ಲೆ ಮಹಾತ್ಮಾ ಗಾಂಧೀಜಿಯವರಿಂದ ಪ್ರಭಾವಿತರಾಗಿದ್ದ ಶ್ರೀ ವಿಶ್ವೇಶತೀರ್ಥರು ೧೯೭೦ರಲ್ಲಿ ದಲಿತರ ಕೇರಿಗೆ ಭೇಟಿ ನೀಡಿದ್ದು ದೊಡ್ಡ ಸುದ್ದಿಯಾಯಿತು. ದಲಿತರ ಕುರಿತು ತನ್ನಲ್ಲಿ ಸಹಾನುಭೂತಿ ಮೂಡಲು ಕಾರಣವಾದ ಒಂದು ಘಟನೆಯನ್ನು ಅವರು ಹೀಗೆ ನೆನಪಿಸಿಕೊಳ್ಳುತ್ತಾರೆ – ''ಒಮ್ಮೆ ಮಠದಲ್ಲಿ ರೈತರ ಜತೆ ಮಠದ ವ್ಯವಹಾರದ ಬಗ್ಗೆ ಮಾತನಾಡುತ್ತಿದ್ದೆ, ಅವರಲ್ಲಿ ಮುಸಲ್ಮಾನ ಹಾಗೂ ಕ್ರೈಸ್ತ ಮತಕ್ಕೆ ಸೇರಿದ ರೈತರೂ ಇದ್ದರು. ಆ

ಸಂದರ್ಭದಲ್ಲಿಯೇ ಹಿಂದುಳಿದ ಪಂಗಡಕ್ಕೆ ಸೇರಿದ ರೈತರೂ ಆಗಮಿಸಿದರು. ಅವರು ಮಠದ ಒಳಗೆ ಬರಲು ಸಂಕೋಚಪಟ್ಟಾಗ, ನಾನು ಒಳಬರುವಂತೆ ಹೇಳಿದೆ. ನನ್ನ ಎದುರಿಗೆ ಕುಳಿತುಕೊಂಡಿರುವ ಮುಸಲ್ಮಾನ, ಕ್ರೈಸ್ತ ಮತಕ್ಕೆ ಸೇರಿದ ರೈತರು, 'ಅವರು ಒಳಗೆ ಬರಲು ಅರ್ಹವಾದ ಜಾತಿಗೆ ಸೇರಿದವರಲ್ಲ' ಎಂದು ತಿಳಿಸಿದಾಗ ನನಗೆ, ಒಳಬರದವರ ಸಂಕೋಚದ ಅರಿವಾಯಿತು. ಇತರ ಧರ್ಮಕ್ಕೆ ಸಂಬಂಧಿಸಿದ ರೈತರು ನನ್ನ ಎದುರಿಗೇ ಕುಳಿತುಕೊಂಡು, ನಮ್ಮ ಧರ್ಮದ ಅನುಯಾಯಿಗಳನ್ನು ತಮ್ಮಂತೆ ಒಳಗೆ ಬರಲು ಅರ್ಹರಲ್ಲವೆಂದು ಹೇಳಿರುವುದು ನಮ್ಮ ಧರ್ಮಕ್ಕೆ ಅವಮಾನವೆಂದು ನನಗೆ ಅರಿವಾಯಿತು. ಇಂತಹ ಕೆಲವು ಸನ್ನಿವೇಶಗಳೇ ಹರಿಜನರ ಸಮಸ್ಯೆಯ ಬಗ್ಗೆ ಗಮನ ಕೊಡಲು ಪ್ರಚೋದಿಸಿದ್ದವು.'' (೯-೨)

ಶ್ರೀ ವಿಶ್ವೇಶತೀರ್ಥರು ದಲಿತರ ಕೇರಿಗೆ ಭೇಟಿ ನೀಡಿದ ಘಟನೆಯ ಬಗ್ಗೆ ''ಸಾಂಪ್ರದಾಯಿಕ ಪೀಠಾಧಿಪತಿಯೊಬ್ಬರು ಮುಂದಾಗಿ ಇಂತಹ ಧೈರ್ಯದ ಹೆಜ್ಜೆ ಇಟ್ಟದ್ದು ಇತಿಹಾಸದಲ್ಲಿ ಒಂದು ಅಪರೂಪದ ಉದಾಹರಣೆಯಾಗಿ ನಿಲ್ಲುತ್ತದೆಂಬುದು ಖಂಡಿತ'' ಎನ್ನುವ ಪಾ. ವೆಂ. ಆಚಾರ್ಯರು ಈ ಘಟನೆಗಳ ಪರಿಣಾಮವನ್ನು ಹೀಗೆ ಗುರುತಿಸುತ್ತಾರೆ – ಶ್ರೀ ವಿಶ್ವೇಶತೀರ್ಥರ ಈ ಹರಿಜನ ಸಂಪರ್ಕದ ಕಾರ್ಯ ಎರಡು ರೀತಿಗಳಿಂದ ಪ್ರಭಾವ ಬೀರುತ್ತಿದೆ. ಒಂದು – ಬಗೆಬಗೆಯ ಸಂಕಟ ಅವಮಾನಗಳಿಂದ ಪೀಡಿತರಾದ, ದೇಶದಲ್ಲಿ ಶೇಕಡಾ ೧೬.೬ರಷ್ಟಿರುವ ದಲಿತರಲ್ಲಿ ಹಿಂದೂ ಧರ್ಮದಲ್ಲಿ ತಮಗೆ ಇನ್ನೂ ಗೌರವದ ಸ್ಥಾನ ಸಂಪಾದನೆ ಸಾಧ್ಯವಿದೆ. ಎಲ್ಲವೂ ನಿರಾಶಾಮಯವಾಗಿಲ್ಲ. ಆತ್ಮಗೌರವವನ್ನು ಸಂಪಾದಿಸುವುದಕ್ಕೆ ತಮ್ಮ ಮಾತೃಧರ್ಮದ ಬೇರುಗಳನ್ನು ಕತ್ತರಿಸಿಕೊಳ್ಳಬೇಕಾಗಿಲ್ಲ ಎಂಬ ಆಶೋದಯವನ್ನುಂಟುಮಾಡಿದೆ. ಇನ್ನೊಂದೆಡೆಯಲ್ಲಿ, ಸವರ್ಣೀಯ ಹಿಂದೂಗಳಲ್ಲಿ ಹರಿಜನ ಸಮಸ್ಯೆಯ ತುರ್ತನ್ನು ಅದು ತೀವ್ರವಾಗಿ ಬಿಂಬಿಸುತ್ತಿದೆ. ಈ ದೀನ ದಲಿತರನ್ನು ಅಲಕ್ಷಿಸುತ್ತಲೇ ಇದ್ದರೆ ಇಡೀ ಹಿಂದೂ ಸಮಾಜವೇ ಹೇಗೆ ವಿಸ್ತರಿಸಲಾರದ ಅಪಾಯಕ್ಕೆ ಗುರಿಯಾದೀತೆಂಬುದನ್ನು ಸವರ್ಣೀಯರ ಗಮನಕ್ಕೆ ಅದು ತಂದು ಕೊಡುತ್ತಿದೆ. (೯-೨)

ಶ್ರೀ ವಿಶ್ವೇಶತೀರ್ಥರು ಹಿಂದೂ ಸವರ್ಣೀಯರ ಹೃದಯ ಪರಿವರ್ತನೆ ಮಾಡಬಲ್ಲರೆಂಬ ನಂಬಿಕೆ ಡಾ। ಯು. ಆರ್. ಅನಂತಮೂರ್ತಿಯವರಿಗಿದೆ – ''ಈಗ ನಾವು ಬದಲಾಗಬೇಕಾದ್ದು ಹರಿಜನರ ವಿಮೋಚನೆಗಾಗಿ ಎಂದು ತಿಳಿಯುವುದು ತಪ್ಪಾಗುತ್ತದೆ. ನಮ್ಮ ದೃಷ್ಟಿಯಲ್ಲಾಗಬೇಕಾದ ಬದಲಾವಣೆ ನಮ್ಮ ವಿಮೋಚನೆಗಾಗಿಯೇ. ಹರಿಜನರನ್ನು ಅಸ್ಪೃಶ್ಯರೆಂದು ದೂರವಿಟ್ಟು ನಾವು ಮಹಾಪಾಪಿಗಳಾಗಿದ್ದೇವೆ. ಈ ಪಾಪವನ್ನು ನಾವು ತೊಳೆದುಕೊಳ್ಳಬೇಕಾಗಿದೆ. ಇಡೀ ನಮ್ಮ ದೇಶಕ್ಕೆ ಈ ವಿಷಯದಲ್ಲಿ ನೀವು ಮಾರ್ಗದರ್ಶಕರಾಗಬೇಕು. ಬ್ರಾಹ್ಮಣರು ಮಾತ್ರವಲ್ಲದೆ, ಉಳಿದ ಹಿಂದೂ ಸವರ್ಣೀಯರ ಹೃದಯ ಪರಿವರ್ತನೆಯನ್ನು ನೀವು ಮಾಡಬೇಕು.'' (೬-೩)

ಮಠಗಳು ಒಂದು ಜಾತಿಯವರಿಗೆ ಸಂಬಂಧಪಟ್ಟವುಗಳಲ್ಲ, ಎಲ್ಲ ಹಿಂದುಗಳಿಗೆ ಸಂಬಂಧಿಸಿದ ಜವಾಬ್ದಾರಿ ಅವುಗಳಿಗಿದೆ ಎಂದು ಶ್ರೀ ವಿಶ್ವೇಶತೀರ್ಥರು ಪ್ರತಿಪಾದಿಸುತ್ತಾರೆ. ಈ ಬಗ್ಗೆ ಸಂಪ್ರದಾಯವಾದಿಗಳಿಂದ ಬಂದ ಆಕ್ಷೇಪಗಳಿಗೆ ಅವರು ಹೀಗೆ ಉತ್ತರಿಸಿದ್ದಾರೆ - ''ಜಗತ್ತಿನ ಜನರ ಕಲ್ಯಾಣಕ್ಕಾಗಿ ತಮ್ಮ ಸಿದ್ಧಾಂತವನ್ನು ಸಾರಿದ ಜಗದ್ಗುರು ಮಧ್ವಾಚಾರ್ಯರ ಪೀಠವು ಕೇವಲ ಒಂದು ಕೋಮಿನ ಪೀಠವಾಗಿರಲು ಹೇಗೆ ಸಾಧ್ಯ ? ಶ್ರೀ ಮಧ್ವಾಚಾರ್ಯರು ಆದೇಶಿಸಿದ ತತ್ತ್ವ ಮತ್ತು ನಿಯಮಗಳಿಗೆ ಅನುಗುಣವಾಗಿ ನಡೆಯುವಾಗ ಸಂಪ್ರದಾಯದ

ಮೌಲ್ಯ ಮತ್ತು ಸಾರ್ವಜನಿಕರ ಸಂಬಂಧ ಇವೆರಡನ್ನು ಸಮನ್ವಯಗೊಳಿಸಲು ಸಾಧ್ಯವೆಂದು ನನ್ನ ದೃಢನಂಬಿಕೆಯಾಗಿದೆ.'' (೯-೨) ''ಮಠಾಧಿಪತಿಗಳು, ಏನೂ ಸಾರ್ವಜನಿಕ ಕಾರ್ಯ ಮಾಡುವುದಿಲ್ಲ ಎಂದು ಒಂದು ಕಾಲದಲ್ಲಿ ಆರೋಪ ಇತ್ತು. ಈಗ, 'ಅವರು ಮಾಡುವುದು ಅತಿರೇಕವಾಯಿತು. ತಮ್ಮ ಪೀಠದ ಅಂತಸ್ತನ್ನು ಕೂಡಾ ಬಿಟ್ಟು ಮುಂದುವರಿಯುತ್ತಾ ಇದ್ದಾರೆ' ಎಂಬ ಮಾತನ್ನೂ ಕೇಳುತ್ತೇವೆ. ಆದರೆ ನಾನು ಇಷ್ಟರವರೆಗೆ ನಡೆಸಿಕೊಂಡು ಬಂದ ರೀತಿ ಈ ಎರಡರ ಸಮನ್ವಯದ ಹಾದಿಯಲ್ಲಿ.'' (೯-೧).

'ಒಂದು ಹೆಜ್ಜೆ ಮುಂದೆ, ಇಷ್ಟು ಸಾಕು ನನಗೆ' ಎಂದು ಗಾಂಧೀಜಿ ಹೇಳುತ್ತಿದ್ದರು. ಶ್ರೀ ವಿಶ್ವೇಶತೀರ್ಥರು ಗಾಂಧೀಜಿಯವರಿಂದ ಪ್ರೇರಣೆ ಪಡೆದರು. ಆದರೆ ಸಂಪ್ರದಾಯಬದ್ಧ ಮಠವೊಂದರ ಪೀಠಾಧಿಪತಿಯಾಗಿ ತನ್ನ ಇತಿ-ಮಿತಿಗಳೇನು ಎಂಬ ಅರಿವು ಶ್ರೀ ವಿಶ್ವೇಶ ತೀರ್ಥರಿಗಿದೆ. ಉಡುಪಿಯ ಸಾರ್ವಜನಿಕ ಸಭೆಯೊಂದರಲ್ಲಿ ದಲಿತ ಕವಿ ಸಿದ್ಧಲಿಂಗಯ್ಯನವರು ಕೇಳಿದ ಪ್ರಶ್ನೆಗೆ ಶ್ರೀ ವಿಶ್ವೇಶತೀರ್ಥರು ನೀಡಿದ ಉತ್ತರವನ್ನು ಗೌರೀಶ ಕಾಯ್ಕಿಣಿಯವರು ತನ್ನ ಲೇಖನದಲ್ಲಿ ದಾಖಲಿಸಿದ್ದಾರೆ – ''ನಾವು ವೈಯಕ್ತಿಕವಾಗಿ ಯಾವುದೇ ಭೇದ - ಭಾವವನ್ನು ನಂಬುವುದಿಲ್ಲ. ಇವು ಅನ್ಯಾಯಪೂರಿತವಾದ ಅನೈತಿಕ ಭೇದಗಳು. ಇವುಗಳನ್ನು ನಂಬುವುದೆಂದರೆ ದೇವರು ಮತ್ತು ದೇವವಾಣಿಯ ವಿರುದ್ಧ ಪಾಪ ಮಾಡಿದಂತೆ. ಮೇಲ್ವರ್ಗ ಕೆಳವರ್ಗ, ಉಚ್ಚ-ನೀಚ ಎಂಬ ಜಾತಿ ಮತಗಳು ತೊಲಗಬೇಕು. ಅವು ನಮ್ಮ ಸನಾತನ ಧರ್ಮದ ಅವಿಭಾಜ್ಯ ಅಂಗಗಳಲ್ಲ. ಮಧ್ಯಯುಗದಲ್ಲಿ ತಲೆಎತ್ತಿ ನಿಂತ ಈ ಜಾತಿ-ಮತಗಳು ಆಧುನಿಕ ಯುಗದಲ್ಲಿ ತಮ್ಮಿಂದ ತಾವೇ ಮಾಯವಾಗುವುವು. ನಾವೀಗ ಮಾಡುತ್ತಿರುವುದು ಅತ್ಯಲ್ಪವೆಂಬ ಅರಿವು ನಮಗಿದೆ. ನಮಗೂ ಸಹ ಇತಿ-ಮಿತಿಗಳುಂಟು. ನಾವು ಸೈನ್ಯದ ಕಪ್ತಾನರು. ನಮ್ಮ ಸೈನ್ಯವನ್ನು ಬಿಟ್ಟು ಬಹಳಷ್ಟು ಹಿಂದೆ, ಬಹಳಷ್ಟು ಮುಂದೆ ಹೋಗಲಾರೆವು. ನಾವು ಬಹಳ ಮುಂದೆ ಹೋದರೆ ಶತ್ರುಗಳು ನಮ್ಮನ್ನು ಬಂಧಿಸುವರು ಅಥವಾ ನಾವೇ ಸಮರಾಂಗಣವನ್ನು ತ್ಯಜಿಸಿದೆವೆಂದು ನಮ್ಮ ಸೈನ್ಯವೇ ನಮ್ಮನ್ನು ಕೊಂದೀತು. ನಾವು ಆದಷ್ಟು ಕಾಳಜಿಯಿಂದಿರಬೇಕು. ನಾವು ಸ್ವಲ್ಪ ದೂರ ಹೋಗಬಹುದೇ ವಿನಾ ಬಹಳಷ್ಟು ದೂರ ಹೋಗಲು ಸಾಧ್ಯವಿಲ್ಲ. ನಮ್ಮ ಸೈನ್ಯವನ್ನು ನಮ್ಮೊಂದಿಗೆ ನಾವು ತೆಗೆದುಕೊಂಡು ಹೋಗಬೇಕು.'' (೬-೧)

ಕರ್ನಾಟಕ ಸರಕಾರದ ಭೂಸುಧಾರಣೆಯ ಶಾಸನವನ್ನು ಶ್ರೀ ವಿಶ್ವೇಶತೀರ್ಥರು ಬೆಂಬಲಿಸಿದರು. ಶ್ರೀ ಕಡಿದಾಳ್ ಮಂಜಪ್ಪನವರನ್ನು ಭೇಟಿಯಾಗಿ ತನ್ನ ಅಭಿಪ್ರಾಯ ತಿಳಿಸಿದರು. (೮-೮). ದಲಿತರಿಗಾಗಿ ಇರುವ ಮೀಸಲಾತಿಯನ್ನು ಸಮರ್ಥಿಸಿದ ಶ್ರೀ ವಿಶ್ವೇಶತೀರ್ಥರು ಮೀಸಲಾತಿಯ ವಿರೋಧವನ್ನು ವಿರೋಧಿಸಿದರು. (೯-೨) ಕೈಗಾ ಹೋರಾಟದಂಥ ಪರಿಸರ ರಕ್ಷಣೆಯ ಚಳವಳಿಯಲ್ಲಿ ಅವರು ಸಕ್ರಿಯ ಪಾತ್ರವಹಿಸಿದ್ದಾರೆ. ಬರಗಾಲಪೀಡಿತರಿಗೆ ಪೇಜಾವರ ಶ್ರೀಗಳು ನೀಡಿದ ನೆರವಿನ ವಿವರಗಳು ಬಿ. ಆರ್. ನಾಡಗೌಡ (೬-೧೧) ಎ. ಹರಿದಾಸ ಭಟ್ಟ (೬-೧೫) ಹಾಗೂ ವಾದಿರಾಜ ಪಂಚಮುಖಿಯವರ (೬-೧೨) ಲೇಖನಗಳಲ್ಲಿವೆ.

ಪೀಠಾಧಿಪತಿಗಳಾಗಿ ಪೇಜಾವರ ಸ್ವಾಮೀಜಿಯವರು ಮಾಡಿದ ಇನ್ನೂ ಕೆಲವು ಸುಧಾರಣೆಗಳನ್ನು ಸಮಾಜಶಾಸ್ತ್ರಜ್ಞ ಪ್ರೊ। ಪಿ. ಶ್ರೀಪತಿ ತಂತ್ರಿಯವರು ತನ್ನ ಲೇಖನದಲ್ಲಿ ಪ್ರಸ್ತಾವಿಸಿದ್ದಾರೆ (೯-೧೪) ಸಂಪ್ರದಾಯವನ್ನು ಮುರಿದು, ಭಂಡಾರಕೇರಿ ಮಠದ ಶ್ರೀ ವಿದ್ಯಾಮಾನ್ಯತೀರ್ಥರನ್ನು ಪಲಿಮಾರುಮಠದ ಪೀಠಾಧಿಪತಿಯಾಗಿ ನೇಮಿಸುವುದರಲ್ಲಿ

ಶ್ರೀ ವಿಶ್ವೇಶತೀರ್ಥರು ಮಹತ್ವದ ಪಾತ್ರ ವಹಿಸಿದರು. (ವಿವರಗಳಿಗಾಗಿ ನೋಡಿ – ಸಂಗೊಳ್ಳಿ, ಎನ್.ಎಸ್. – 'ಉಡುಪಿ ಶ್ರೀಕೃಷ್ಣ ಮಠದ ಖಟ್ಲೆ, ತೀರ್ಪು, ಗದಗ, ೧೯೮೨) ಬಾಲಸನ್ಯಾಸದ ಕಟ್ಟುನಿಟ್ಟಿನ ಸಂಪ್ರದಾಯವನ್ನು ನಾಜೂಕಾಗಿ ಸಡಿಲಿಸಿ ಯೌವನದ ಬಳಿಕವೇ ಸನ್ಯಾಸದೀಕ್ಷೆ ನೀಡುವ ಕ್ರಮವನ್ನು ಆರಂಭಿಸಿದರು. ಶೃಂಗೇರಿ ಸ್ವಾಮಿಗಳನ್ನು, ವೀರಶೈವ ಪೀಠಾಧಿಪತಿಗಳನ್ನು ತನ್ನ ಸೌಹಾರ್ದತೆಯ ಕಕ್ಷೆಯೊಳಗೆ ಸ್ವಾಗತಿಸಿದರು. ಇದು "ಹಿಂದೂ ಧರ್ಮದ ಅನೇಕತೆಯಲ್ಲಿ ಏಕತೆಯನ್ನು ಸಾಧಿಸಲು ಪೀಠಾಧಿಪತಿಗಳ ಮಟ್ಟದಲ್ಲಿ ಇಟ್ಟ ಮೊದಲ ಹೆಜ್ಜೆ"ಯಾಗಿತ್ತು. (೬-೧೪) ತನ್ನ ಪಾಠ-ಪ್ರವಚನ, ಬರವಣಿಗೆ, ಸಂಸ್ಥೆಗಳ ಸ್ಥಾಪನೆ-ಚಾಲನೆ, ಸಭೆ ಸಮಾರಂಭಗಳ ಆಯೋಜನೆ, ಪಂಡಿತರ ಪೋಷಣೆ-ಪ್ರೋತ್ಸಾಹ, ಪ್ರಕಟಣೆ-ಪ್ರಕಾಶನಗಳ ಮೂಲಕ ಮಾಧ್ವ ಸಿದ್ಧಾಂತಕ್ಕೆ ಶ್ರೀ ವಿಶ್ವೇಶತೀರ್ಥರು ನೀಡಿರುವ ಕೊಡುಗೆಯನ್ನು ಸಗ್ರಿ, ರಾಘವೇಂದ್ರ ಉಪಾಧ್ಯಾಯರು ಸಮೀಕ್ಷಿಸಿದ್ದಾರೆ (೬-೯).

## 'ಪ್ರಗತಿಶೀಲ ಸಮಾಜ ಸುಧಾರಕ'

ರಾಮಜನ್ಮಭೂಮಿ ಪ್ರಕರಣದಲ್ಲಿ ತನ್ನ ಶಾಂತಿ ಪ್ರಯತ್ನಗಳು ವಿಫಲವಾದುದನ್ನು ಶ್ರೀ ವಿಶ್ವೇಶತೀರ್ಥರು ತನ್ನ ಆತ್ಮಕಥನದಲ್ಲಿ ಹೀಗೆ ವಿವರಿಸಿದ್ದಾರೆ– "ರಾಮಜನ್ಮಭೂಮಿಯನ್ನು ಸಂತರಿಗೆ ಒಪ್ಪಿಸಬೇಕು. ಅಲ್ಲಿದ್ದ ಮಸೀದಿಯನ್ನು ಒಡೆಯದೆ ಹಾಗೆಯೇ ಉಳಿಸಿಕೊಂಡು ದೇವಸ್ಥಾನದ ರೂಪು ಬರುವಂತೆ ಕೆಲವೊಂದು ಬದಲಾವಣೆಗಳನ್ನು ಮಾತ್ರ ಮಾಡುವುದು. ಇದು ಕಾಂಚಿ ಶಂಕರಾಚಾರ್ಯರೂ ನಾವೂ ಆಲೋಚಿಸಿ ರೂಪಿಸಿದ ಸೂತ್ರವಾಗಿತ್ತು. ಮಸೀದಿಯನ್ನು ಒಡೆಯದಿರುವುದರಿಂದ ಮುಸಲ್ಮಾನರ ಮನಸ್ಸಿಗೂ ಆಘಾತವಾಗುವುದಿಲ್ಲ. ಅವರನ್ನೂ ಇದಕ್ಕೆ ಒಪ್ಪಿಸಬಹುದೆಂದು ಅನೇಕ ರಾಜಕಾರಣಿಗಳ ಅಭಿಪ್ರಾಯವಾಗಿತ್ತು." "ಅನಂತರದಲ್ಲಿ ವಿಶ್ವ ಹಿಂದೂ ಪರಿಷತ್ತಿನ ಪ್ರಮುಖ ಹಿಂದು ಮುಸ್ಲಿಂ ಸಂತರ ವಿಚಾರವಿನಿಮಯ ಸಭೆಯನ್ನು ಏರ್ಪಡಿಸಲು ಪ್ರಯತ್ನಿಸಿದೆ. ಆಂಧ್ರಭವನದಲ್ಲಿ ಆಂಧ್ರ ರಾಜ್ಯಪಾಲ ಕೃಷ್ಣಕಾಂತಜಿ ಮತ್ತು ಬಿಹಾರದ ರಾಜ್ಯಪಾಲ ಸಲೀಮರ ಉಪಸ್ಥಿತಿಯಲ್ಲಿ ಈ ಸಭೆಯು ನಡೆಯಿತು. ಬಹಳ ಸೌಹಾರ್ದದ ವಾತಾವರಣದಲ್ಲಿಯೇ ಈ ಸಭೆಯು ನಡೆಯಿತು. ನನ್ನ ಜೊತೆಗೆ ವಿಶ್ವಹಿಂದೂ ಪ್ರಮುಖ ಸಂತರಾದ ಸತ್ಯಮಿತ್ರಾನಂದಜಿ, ಸ್ವಾಮೀ ಚಿನ್ಮಯಾನಂದ ಮುಂತಾದವರೂ ಭಾಗವಹಿಸಿದ್ದರು. ಲಖನೋದ ಆಲಿಮಿಯಾನ್ ಮುಂತಾದ ರಾಷ್ಟ್ರದ ಪ್ರಮುಖ ಮುಸ್ಲಿಂ ಸಂತರು ಬಂದಿದ್ದರು. ನಾವು ಸಂನ್ಯಾಸಿಗಳು, ಭಿಕ್ಷೆ ಬೇಡುವುದು ಧರ್ಮ, ರಾಮಜನ್ಮಭೂಮಿಯ ಜಾಗದಲ್ಲಿರುವ ಬಾಬ್ರಿ ಮಸೀದಿಯನ್ನು ನಮಗೆ ಬಿಟ್ಟುಕೊಡಿ ಎಂದು ಇಡೀ ಮುಸ್ಲಿಂ ಸಮಾಜದಲ್ಲಿ ನಾವು ಭಿಕ್ಷೆಯನ್ನು ಕೇಳುತ್ತೇವೆಂದು ಹಿಂದೂ ಸಂತರು ತಮ್ಮ ಬೇಡಿಕೆಯನ್ನು ಮುಂದಿಟ್ಟರು. ಮುಸ್ಲಿಂ ಸಂತರಿಂದ ಈ ಬಗ್ಗೆ ಒಳ್ಳೆಯ ಪ್ರತಿಕ್ರಿಯೆಯೇ ಬಂದಿತು. ಅವರು ಈ ಬೇಡಿಕೆಯನ್ನು ನಿರಾಕರಿಸಲಿಲ್ಲ. ಮುಸಲ್ಮಾನರಿಗೆ ಆ ಪ್ರದೇಶದಲ್ಲಿ ಯಾವುದಾದರೂ ಒಂದು ಸ್ಥಳದಲ್ಲಿ ಪ್ರಾರ್ಥನೆ ಸಲ್ಲಿಸಲು ಅವಕಾಶ ಕೊಡುವಿರಾ ? ಎಂದು ಮುಸ್ಲಿಂ ಸಂತರು ನಮ್ಮಲ್ಲಿ ಪ್ರಶ್ನಿಸಿದರು. ಅವಕಾಶ ಕೊಡಲು ನಾವು ಸಂತೋಷದಿಂದ ಒಪ್ಪಿದೆವು. ವಿವಾದಿತ ಪ್ರದೇಶದಲ್ಲಿ ಕರಸೇವೆ ಕಾರ್ಯಕ್ರಮವನ್ನು ಮೊದಲು ಸ್ಥಗಿತಗೊಳಿಸುವಂತೆ ಬಿಹಾರದ ರಾಜ್ಯಪಾಲ ಸಲೀಮರು ಸೂಚಿಸಿದರು. ನಮ್ಮ ಬೇಡಿಕೆಯನ್ನು ಮುಸ್ಲಿಂ ಸಂತರು ಸ್ವೀಕರಿಸಿ ವಿವಾದವನ್ನು

ಹಿಂತೆಗೆದುಕೊಂಡರೆ ಅದು ವಿವಾದಿತ ಪ್ರದೇಶವೇ ಆಗಲಾರದು. ಆದುದರಿಂದ ಕರಸೇವೆಯನ್ನು ನಿಲ್ಲಿಸುವ ಅವಶ್ಯಕತೆಯಿಲ್ಲವೆಂದು ನಾನು ಪ್ರತಿವಾದಿಸಿದೆ. ಕೊನೆಗೆ ತಾತ್ವಿಕವಾಗಿ ಅವರು ನಮ್ಮ ಬೇಡಿಕೆಯನ್ನು ಸ್ವೀಕರಿಸಿದರು. ಆದರೆ ಮುಸ್ಲಿಂ ಸಮಾಜವು ಇದನ್ನು ಒಪ್ಪುವಂತೆ ಪೂರ್ವಸಿದ್ಧತೆಯನ್ನು ಮಾಡಬೇಕಾಗಿದೆ. ಆದ್ದರಿಂದ ಕಾಲಾವಕಾಶ ಬೇಕೆಂದು ಬಯಸಿದರು. ಈ ವಿವಾದವನ್ನು ಬಗೆಹರಿಸಲು ಹಿಂದೂ-ಮುಸ್ಲಿಂ ಸಂತರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಲಾಯಿತು. ಅಷ್ಟರಲ್ಲಿ ಬಿಹಾರಿನಲ್ಲಿ ಅದ್ವಾನಿ– ರಥಯಾತ್ರೆಯನ್ನು ತಡೆದು ಅದ್ವಾನಿಯವರ ಬಂಧನ, ವಿ.ಪಿ.ಸಿಂಗ್ ಸರಕಾರದ ಪತನ ಮುಂತಾದ ಘಟನೆಗಳು ಸಂಭವಿಸಿದ್ದರಿಂದ ಆ ಸಮಿತಿಯ ಸಮಾವೇಶವೇ ನಡೆಯಲಿಲ್ಲ. ಹೀಗಾಗಿ ರಾಮಜನ್ಮಭೂಮಿಯ ಬಗ್ಗೆ ನಮ್ಮ ಶಾಂತಿ ಪ್ರಯತ್ನವು ವಿಫಲವಾಯಿತು.'' (೨-೧)

ರಾಜಾರಾಮ ತೋಳ್ಪಾಡಿಯವರು ಶ್ರೀ ವಿಶ್ವೇಶತೀರ್ಥರ ರಾಜಕೀಯ ಒಲವುಗಳನ್ನು ಕುರಿತ ಲೇಖನದಲ್ಲಿ ಮೂರು ಅಂಶಗಳನ್ನು ಗುರುತಿಸಿದ್ದಾರೆ. ಒಂದು-ಪ್ರಜಾಸತ್ತಾತ್ಮಕ ರಾಜಕೀಯ ವ್ಯವಸ್ಥೆಯ ಬಗೆಗಿನ ಅವರ ಅಚಲವಾದ ವಿಶ್ವಾಸ. ಎರಡು-ಗಾಂಧೀಜಿಯವರ ವಿಚಾರಗಳ ಬಗೆಗಿನ ಅವರ ಅಪರಿಮಿತವಾದ ಗೌರವ. ಮೂರು-ಸಮಾಜವಾದದ ಕುರಿತು ವಿಶೇಷವಾಗಿ ಜಯಪ್ರಕಾಶ್ ನಾರಾಯಣ್ ಪ್ರತಿಪಾದಿಸಿದ ವಿಚಾರಗಳ ಕುರಿತು ಅವರ ಕಾಳಜಿ. ಶ್ರೀ ವಿಶ್ವೇಶತೀರ್ಥರು ಪ್ರತಿಚುನಾವಣೆಯಲ್ಲೂ ಮತದಾನ ಮಾಡಿದ್ದಾರೆ. ಶ್ರೀಮತಿ ಇಂದಿರಾ ಗಾಂಧಿಯವರ ಕಾಲದ ತುರ್ತು ಪರಿಸ್ಥಿತಿಯನ್ನು ಪ್ರತಿಭಟಿಸಿ ಅವರು ಬರೆದ ಪತ್ರ ಈ ಗ್ರಂಥದಲ್ಲಿದೆ (೭-೧).

ಶ್ರೀ ವಿಶ್ವೇಶತೀರ್ಥರನ್ನು, ಗಾಂಧೀಜಿಯ ಅಹಿಂಸೆಯ ಪರಿಕಲ್ಪನೆಯನ್ನು ಕೆಲವು ತಿದ್ದುಪಡಿಗಳೊಂದಿಗೆ ಒಂದು ಪರಿಷ್ಕೃತ ರೂಪದಲ್ಲಿ ಒಪ್ಪಿಕೊಳ್ಳುವ ಓರ್ವ 'ಮೃದು ಹಿಂದುತ್ವವಾದಿ' ಎಂದು ಪರಿಗಣಿಸುವ ರಾಜಾರಾಮ ತೋಳ್ಪಾಡಿಯವರು, ''ಜಾತೀಯತೆ ಪ್ರತಿನಿಧಿಸುವ ಸಂಕುಚಿತ ದೃಷ್ಟಿಯನ್ನು ತೊಲಗಿಸುವ ನೆಲೆಯಲ್ಲಿ ಅವರು ನಡೆಸಿದ ಪ್ರಯತ್ನಗಳು, ದಲಿತರು ಹಾಗೂ ಸಮಾಜದ ಇತರ ಹಿಂದುಳಿದ ವರ್ಗಗಳ ಕುರಿತಂತೆ ಅವರ ಔದಾರ್ಯಪೂರ್ಣವಾದ ನಿಲುವು, ಸಾಮಾಜಿಕ ಅಸಮತೆ ಹಾಗೂ ಅನ್ಯಾಯಗಳ ಕುರಿತು ಅವರ ಪ್ರತಿರೋಧ, ಸ್ವಾಮೀಜಿಯವರನ್ನು ಒಬ್ಬ ಪ್ರಗತಿಶೀಲ ಸಮಾಜ ಸುಧಾರಕನನ್ನಾಗಿ ಗುರುತಿಸಲು ನಮ್ಮನ್ನು ಒತ್ತಾಯಿಸುತ್ತದೆ'' ಎನ್ನುತ್ತಾರೆ. (೭-೨)

## ಶಿಷ್ಯ-ವಾತ್ಸಲ್ಯ

ಹದಿನೇಳು ಸುಧಾ ಮಂಗಲೋತ್ಸವಗಳನ್ನು ನಡೆಸಿರುವ, ಬೆಂಗಳೂರಿನ ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠದ ಕುಲಪತಿಗಳಾಗಿರುವ ಶ್ರೀ ವಿಶ್ವೇಶತೀರ್ಥರು ಗಹನವಾದ ತಾತ್ವಿಕ ವಿಷಯಗಳನ್ನು ಸರಳವಾಗಿ ವಿವರಿಸಬಲ್ಲ ಬೋಧಕರಾಗಿ ಪ್ರಸಿದ್ಧರು. ಅವರ ಬೋಧನ ಕ್ರಮ ಹಾಗೂ ಶಿಷ್ಯವಾತ್ಸಲ್ಯಗಳನ್ನು ಕುರಿತು ಶ್ರೀ ವಿಶ್ವಪ್ರಸನ್ನತೀರ್ಥ ಶ್ರೀಪಾದರು, ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಪಾದರು, ಎ. ವಿ. ನಾಗಸಂಪಿಗೆ, ಸಗ್ರಿ ರಾಘವೇಂದ್ರ ಉಪಾಧ್ಯಾಯ, ಡಾ। ರಾಮಕೃಷ್ಣ ಜೋಶಿ, ಕೆ. ವಿಠ್ಠಲೋಪಾಧ್ಯಾಯ, ಅರುಣಾಚಲ ಹೆಬ್ಬಾರ್ ಹಾಗೂ ಡಿ. ಸುದರ್ಶನ ಜೋಯಿಸರು ಬರೆದಿರುವ ಲೇಖನಗಳು ಈ ಗ್ರಂಥದ ಎಂಟನೆಯ ಭಾಗದಲ್ಲಿವೆ. ಉಡುಪಿಯ

ಸಂಸ್ಕೃತ ಕಾಲೇಜಿನಲ್ಲಿ ಶ್ರೀ ವಿಶ್ವೇಶತೀರ್ಥರು ಮಾಡಿದ ಜಗನ್ನಾಥನ ಶೃಂಗಾರರಸ ಪ್ರಧಾನವಾದ 'ರಸಗಂಗಾಧರ' ಪಾಠ ಕೇಳಿದ್ದನ್ನು ಡಿ. ಸುದರ್ಶನ ಜೋಯಿಸ್ ನೆನಪಿಸಿಕೊಂಡಿದ್ದಾರೆ. (೮-೮) ಪೂರ್ಣಪ್ರಜ್ಞ ವಿದ್ಯಾಪೀಠದ ಒಬ್ಬ ವಿದ್ಯಾರ್ಥಿ ಪಾಠ-ಪ್ರವಚನಗಳಲ್ಲಿ ಅನಾಸಕ್ತನಾದ. ಅವನನ್ನು ತಿದ್ದಲು ಸಾಧ್ಯವಾಗದೆ ಪ್ರಾಧ್ಯಾಪಕರು ಸೋಲೊಪ್ಪಿಕೊಂಡರು. ಶ್ರೀ ವಿಶ್ವೇಶತೀರ್ಥರು ಅವನನ್ನು ತನ್ನ ಜತೆಯಲ್ಲಿರಿಸಿಕೊಂಡು ಸರಿದಾರಿಗೆ ತರಲು ಪ್ರಯತ್ನಿಸಿ ಕೊನೆಗೆ ಸೋಲೊಪ್ಪಿಕೊಂಡರು. (೮-೫) ಮಾತೃ ವಾತ್ಸಲ್ಯದಿಂದ ತುಂಬಿದ ಪೇಜಾವರ ಶ್ರೀಗಳ ಶಿಷ್ಯ-ವಾತ್ಸಲ್ಯವನ್ನು ಕುರಿತು ಹೆಚ್ಚಿನವರು ಪ್ರಸ್ತಾವಿಸಿದ್ದಾರೆ. ಒಮ್ಮೆ ಮಠದಲ್ಲಿ ಆರ್ಥಿಕ ದುಸ್ಥಿತಿ ಇದ್ದಾಗ ಶ್ರೀ ವಿಶ್ವೇಶತೀರ್ಥರು ಮುಸುಂಬಿ ರಸ ಕುಡಿಯಲು ನಿರಾಕರಿಸಿ, 'ಮುಸುಂಬಿ ತರಬೇಡಿ, ಆ ಹಣವನ್ನು ಮಠದ ವಿದ್ಯಾರ್ಥಿಗಳ ಊಟದ ಖರ್ಚಿಗೆ ತೆಗೆದಿರಿಸಿ' ಎಂದರಂತೆ. (೮-೬) ತನ್ನ ಸಂಚಾರದ ಅವಧಿಯಲ್ಲೂ ಶ್ರೀ ವಿಶ್ವೇಶತೀರ್ಥರು ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಾರೆ. (೬-೯)

'ಸೀತಾಯಣ'ದ ಪೋಲಂಕಿ ರಾಮಮೂರ್ತಿಯವರೊಡನೆ ಶ್ರೀ ವಿಶ್ವೇಶತೀರ್ಥರು ನಡೆಸಿದ ಸಂವಾದದ ವಿವರಗಳು ಶ್ರೀ ವಿಶ್ವಪ್ರಸನ್ನತೀರ್ಥರ (೮-೧) ಹಾಗೂ ಪ್ರೊ। ಶ್ರೀಪತಿ ತಂತ್ರಿಗಳ (೯-೧೪) ಲೇಖನಗಳಲ್ಲಿವೆ. ಸಂಸ್ಕೃತ ಗೊತ್ತಿಲ್ಲದೆ ಭಾಷಾಂತರದ ಮೂಲಕ ವಾಲ್ಮೀಕಿ ರಾಮಾಯಣವನ್ನು ಅರ್ಥೈಸುವಾಗ ಆಗಿರುವ ಪ್ರಮಾದಗಳನ್ನು ಶ್ರೀ ವಿಶ್ವೇಶತೀರ್ಥರು ಪೋಲಂಕಿಯವರಿಗೆ ವಿವರಿಸಿದರು. ಪೋಲಂಕಿಯವರು ತನ್ನ ತಪ್ಪುಗಳನ್ನು ಒಪ್ಪಿಕೊಂಡರು.

## ಲೋಕಾಂತಪ್ರಿಯ

'ಪೇಜಾವರ ಪ್ರಶಸ್ತಿ'ಯ ಒಂಬತ್ತನೆಯ ಭಾಗದಲ್ಲಿ ಶ್ರೀ ವಿಶ್ವೇಶತೀರ್ಥರ ಐದು ಸಂದರ್ಶನಗಳಿವೆ. ಲಕ್ಷ್ಮಣರೇಖೆಯನ್ನು ದಾಟಿದ ಪೀಠಾಧಿಪತಿಯಾಗಿ ಶ್ರೀ ವಿಶ್ವೇಶತೀರ್ಥರ ಎದುರಿಸಿದ ಪ್ರಶ್ನೆಗಳು, ಅವುಗಳಿಗೆ ನೀಡಿರುವ ಉತ್ತರಗಳು ಎ. ಹರಿದಾಸ ಭಟ್ಟ ಹಾಗೂ ಗೋಪಾಡಿ ರಾಘವೇಂದ್ರ, ಭಟ್ಟರ ಸಂದರ್ಶನಗಳಲ್ಲಿವೆ. ಧಾರ್ಮಿಕ, ಸಾಮಾಜಿಕ ಆಚರಣೆಗಳಲ್ಲಿರುವ ಲಿಂಗಾಧಾರಿತ ಅಸಮಾನತೆಯನ್ನು ಕುರಿತ ಶ್ರೀ ವಿಶ್ವೇಶತೀರ್ಥರ ಅಭಿಪ್ರಾಯಗಳು ಡಾ। (ಶ್ರೀಮತಿ) ಶ್ರೀರಾಮ ಹರ್ಲೆಕರ ಅವರ ಲೇಖನದಲ್ಲಿವೆ. (೯-೨) ಬಾಲಸನ್ಯಾಸ, ಶಿಕ್ಷಣದಲ್ಲಿ ಕನ್ನಡ-ಸಂಸ್ಕೃತಗಳ ಸ್ಥಾನ-ಮಾನ, ಮೀಸಲಾತಿ, ತುರ್ತುಪರಿಸ್ಥಿತಿ ಈ ವಿಷಯಗಳನ್ನು ಕುರಿತ ಪೇಜಾವರ ಸ್ವಾಮೀಜಿಯವರ ಅಭಿಪ್ರಾಯಗಳು ಪ್ರೊ। ಕು.ಶಿ. ಹರಿದಾಸ ಭಟ್ಟರಿಗೆ ನೀಡಿದ ಸಂದರ್ಶನದಲ್ಲಿವೆ. (೯-೧)

'ನಿಮಗೆ ಏಕಾಂತ ಇಷ್ಟವೋ ಅಥವಾ ಲೋಕಾಂತವೋ ?' ಎಂಬ ಪ್ರಶ್ನೆಗೆ ಶ್ರೀ ವಿಶ್ವೇಶ ತೀರ್ಥರು ಹೀಗೆ ಉತ್ತರ ನೀಡಿದ್ದಾರೆ- ''ಇದು ಎರಡೂ ಬೇಕಾಗುತ್ತದೆ. ಕೆಲವೊಮ್ಮೆ ಚಿಂತನ-ಮಂಥನ ಬಯಸುವಾಗ ಎಲ್ಲರಿಂದ ಪ್ರತ್ಯೇಕವಾಗಿ ಇರಬೇಕು ಅಂಥ ನನಗೆ ಅನ್ನಿಸುತ್ತದೆ. ಆದರೆ ಬರೀ ಏಕಾಂತವೂ ನನ್ನ ಸ್ವಭಾವಕ್ಕೆ ಒಗ್ಗುವುದಿಲ್ಲ. ಸಮಾಜದ ಮಧ್ಯೆ ಇರುವುದರಿಂದಲೇ ನನಗೆ ಸನ್ಯಾಸಿಯಾಗಿ ಒಳ್ಳೆಯ ರೀತಿಯ ಬದುಕನ್ನು ಬದುಕಲು ಹೆಚ್ಚು ಅನುಕೂಲ ವಾಗಿದೆಯೆಂದು ನಾನು ಭಾವಿಸುತ್ತೇನೆ.'' (೯-೧)

'ಕೊಟ್ಟ ಕುದುರೆಯನೇರಿ ಗಡಿದಾಟಿದ' ಶ್ರೀ ವಿಶ್ವೇಶತೀರ್ಥರ ಪೂರ್ಣದೃಷ್ಟಿ ಅನಿಕೇತನವಾಗಿ, ವಿಶ್ವವ್ಯಾಪಿಯಾಗುತ್ತದೆ – ''ಅಲ್ಲದೆ ಕೇವಲ ಹಿಂದೂ ಸಮಾಜಕ್ಕೆ, ತತ್ತ್ವ ಜ್ಞಾನಕ್ಕೆ

ಸೀಮಿತರಾಗದೆ ಪ್ರಪಂಚದ ಮಾನವರಾಗಿ ಕೂಡ ಸ್ಪಂದಿಸಬೇಕು. ಮನುಷ್ಯರಿಗೆ, ಪ್ರಾಣಿಗಳಿಗೆ ಆಗುವ ಆಘಾತಗಳಿಗೆ ಕೂಡ ಸ್ಪಂದಿಸಬೇಕು. ಕೈಗಾ ಚಳವಳಿಯಂತಹ ಚಳವಳಿಯಲ್ಲಿ ನಾವು ತೊಡಗಿದಾಗ ಜನತೆ ನಮ್ಮ ಕಳಕಳಿಯನ್ನು ಅರ್ಥಮಾಡಿಕೊಳ್ಳಬೇಕು." (೬-೪)

ಈ ಗ್ರಂಥದ ಯೋಜನೆಯನ್ನು ಸಿದ್ಧಪಡಿಸುವಾಗ ನಾವು ಶ್ರೀ ವಿಶ್ವೇಶತೀರ್ಥರನ್ನು ಭೇಟಿಯಾಗಿ, ಅವರ ಮಾರ್ಗದರ್ಶನದಲ್ಲಿರುವ ಸುಮಾರು ಅರುವತ್ತು ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಸಂಸ್ಥೆಗಳ ಪಟ್ಟಿ ತಯಾರಿಸಿದೆವು. (೧೧-೫) ಆ ಎಲ್ಲ ಸಂಸ್ಥೆಗಳ ಸಂಕ್ಷಿಪ್ತ ಪರಿಚಯವನ್ನು ಈ ಗ್ರಂಥದಲ್ಲಿ ಪ್ರಕಟಿಸಬೇಕೆಂಬ ನಮ್ಮ ಯೋಜನೆ ಯಶಸ್ವಿಯಾಗಲಿಲ್ಲ. ಈ ಗ್ರಂಥ ಪ್ರಕಟಣೆಗಿದ್ದ ಕಾಲಮಿತಿ ಹಾಗೂ ಪೇಜಾವರ ಮಠದ ಸಂಸ್ಥೆಗಳನ್ನು ನೋಡಿಕೊಳ್ಳುವ ಒಂದು ಕೇಂದ್ರೀಕೃತ ವ್ಯವಸ್ಥೆ ಇಲ್ಲದಿರುವುದು ಇದಕ್ಕೆ ಕಾರಣ. ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಮಾರ್ಗದರ್ಶನ ಪಡೆಯುತ್ತಿರುವ ಹದಿನಾಲ್ಕು ಸಂಸ್ಥೆಗಳ ಪರಿಚಯ ಹಾಗೂ ಛಾಯಾಚಿತ್ರಗಳು ಈ ಗ್ರಂಥದ ಹತ್ತನೆಯ ಭಾಗದಲ್ಲಿವೆ. ಅನುಬಂಧದಲ್ಲಿ ಪೇಜಾವರ ಶ್ರೀಗಳ ಜೀವನ-ಸಾಧನೆಗಳಿಗೆ ಸಂಬಂಧಪಟ್ಟ ಹಲವು ಉಪಯುಕ್ತ ಮಾಹಿತಿಗಳಿವೆ.

ಶ್ರೀ ವಿಶ್ವೇಶತೀರ್ಥರ ಸಾಧನೆ, ವೇದಾಂತದ ಜೀವನ ವಿಮುಖ ರೂಪವನ್ನು ಮರೆಮಾಡಿ, ತಗ್ಗಿಸಿ, ಜೀವನಪರವಾದ ರೂಪಕ್ಕೆ ಒತ್ತು ಕೊಟ್ಟು ಬೆಳಗಿಸಿದ ರಾಜಾರಾಮ ಮೋಹನ್ ರಾಯ್, ದಯಾನಂದ ಸರಸ್ವತಿ ಮೊದಲಾದವರ ಕೆಲಸದ ಮುಂದುವರಿಕೆ ಎನ್ನುವ ಡಾ। ಎಂ. ಪ್ರಭಾಕರ ಜೋಶಿಯವರ ಹಾರೈಕೆ, ಈ ಗ್ರಂಥದ ಸಂಪಾದಕರ ಹಾರೈಕೆಯೂ ಹೌದು- "ಒಂದು ಹೆಜ್ಜೆ ಮುಂದಿಟ್ಟವರು ನಿಶ್ಚಿತವಾಗಿಯೂ ಪ್ರಶಂಸಾರ್ಹರೇ. ಶ್ರೀ ವಿಶ್ವೇಶತೀರ್ಥರಿಗೆ ಇರುವ ಅಸಾಮಾನ್ಯ ಪ್ರಭಾವ, ಸಾಮರ್ಥ್ಯಗಳಿಂದ ಅವರು ಇನ್ನೂ ಸ್ವಲ್ಪ ಮುಂದೆ ಹೋಗಬಹುದಿತ್ತು, ಹೋಗಬೇಕು ಎಂದು ನಿರೀಕ್ಷೆ ಇದ್ದರೆ ಅದು ನ್ಯಾಯವಾದದ್ದು. ಈ ನಿರೀಕ್ಷೆಯನ್ನು ಪೂರೈಸುವ ಹೊಸ ಉಪಕ್ರಮಗಳು ಅವರ ಸನ್ಮಾನ ಷಷ್ಟ್ಯಬ್ದಿಯ ಸಂಕಲ್ಪವಾಗಲಿ." (೯-೧೩)

ಶ್ರೀ ವಿಶ್ವೇಶತೀರ್ಥರು, ತುರ್ತುಪರಿಸ್ಥಿತಿಯನ್ನು ಹೇರಿ ಜನರ ಮೂಲಭೂತ ಹಕ್ಕುಗಳನ್ನು ಕಿತ್ತುಕೊಂಡಿದ್ದ ಪ್ರಧಾನಿ ಇಂದಿರಾಗಾಂಧಿಯವರಿಗೆ ಬರೆದ ಪತ್ರದಲ್ಲಿ ಸಂಸ್ಕೃತ ಸುಭಾಷಿತವೊಂದನ್ನು ನೆನಪಿಸಿದ್ದರು-

**"ಸುಲಭಾಃ ಪುರುಷಾಃ ರಾಜನ್ ಸತತಂ ಪ್ರಿಯವಾದಿನಃ**
**ಅಪ್ರಿಯಸ್ಯ ಚ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ"**

(ಮುಖದೆದರು ಸಿಹಿಯಾಗಿ ಮಾತನಾಡುವ ಜನ ಹೇರಳವಾಗಿ ಸಿಗುತ್ತಾರೆ. ಆದರೆ, ಕಹಿಯಾದರೂ ವಿಹಿತವಾದುದನ್ನು ಹೇಳುವವರಾಗಲಿ, ಕೇಳುವವರಾಗಲಿ ಸಿಗುವುದು ಕಷ್ಟ.) 'ಪೇಜಾವರ ಪ್ರಶಸ್ತಿ' ಗ್ರಂಥದ ಓದುಗರೂ ಈ ಸುಭಾಷಿತದ ಒಡಲಾಳದ ಆಶಯವನ್ನು ನೆನಪಿಡಬೇಕೆಂದು ನಾವು ವಿನಯಪೂರ್ವಕವಾಗಿ ಕೇಳಿಕೊಳ್ಳುತ್ತೇವೆ.

* * *

'ಪೇಜಾವರ ಸ್ವಾಮಿಗಳಿಗೆ ಚಿನ್ನದ ತುಲಾಭಾರ ಮಾಡುವಷ್ಟೇ ಮುಖ್ಯ ಅವರ ವ್ಯಕ್ತಿತ್ವದ ಸಮಗ್ರ ಪರಿಚಯ ನೀಡುವ ಗ್ರಂಥವೊಂದರ ಪ್ರಕಟಣೆ' ಎಂದು ತಿಳಿಸಿದವರು ಧರ್ಮಸ್ಥಳದ ಧರ್ಮಾಧಿಕಾರಿಗಳಾದ, ಶ್ರೀ ವಿಶ್ವೇಶತೀರ್ಥರ ಪೀಠಾರೋಹಣದ ವಜ್ರ ಮಹೋತ್ಸವ ಸಮಿತಿಯ ಕಾರ್ಯಾಧ್ಯಕ್ಷರಾದ ರಾಜರ್ಷಿ ಡಾ। ಡಿ. ವೀರೇಂದ್ರ ಹೆಗ್ಗಡೆಯವರು. ಶ್ರೀ ಹೆಗ್ಗಡೆ

ಯವರ ಕನಸನ್ನು ನಮಗೆ ವಿವರಿಸಿ, ಈ ಕೆಲಸಕ್ಕೆ ನಮ್ಮನ್ನು ತೊಡಗಿಸಿದವರು ಪ್ರೊ। ಕು. ಶಿ. ಹರಿದಾಸ ಭಟ್ಟರು.

ಈ ಗ್ರಂಥದ ಪ್ರಕಾಶಕರು ಬೆಂಗಳೂರಿನ, ಶ್ರೀ ವಿಶ್ವೇಶತೀರ್ಥರ ಪೀಠಾರೋಹಣ ವಜ್ರಮಹೋತ್ಸವ ಸಮಿತಿಯವರು. (ಗೌರವಾಧ್ಯಕ್ಷರು-ನಿವೃತ್ತ ಮುಖ್ಯ ನ್ಯಾಯಾಧೀಶರು ಶ್ರೀ ಎಂ. ಎನ್. ವೆಂಕಟಾಚಲಯ್ಯ, ಉಪಾಧ್ಯಕ್ಷರು – ಶ್ರೀ ಕೆ. ವಿಷ್ಣುಮೂರ್ತಿ ಎರ್ಕಾಡಿತ್ತಾಯ, ಪ್ರೊ। ಕೆ.ಟಿ. ಪಾಂಡುರಂಗಿ, ಶ್ರೀ ಸದಾನಂದ ಎ. ಶೆಟ್ಟಿ, ಶ್ರೀ ಬಿ. ಆರ್. ಶೆಟ್ಟಿ, ಶ್ರೀ ಎನ್. ವಿನಯ ಹೆಗ್ಡೆ, ಶ್ರೀ ಬಿ. ಕೃಷ್ಣ ಭಟ್, ಶ್ರೀ ಕೆ. ಬಲರಾಮ ದಾಸ್, ಶ್ರೀ ಕೆ. ಶಂಕರ ರಾವ್, ಶ್ರೀ ಬಿ. ಗೋವಿಂದ ರಾವ್, ಖಜಾಂಚಿ - ಶ್ರೀ ಎಸ್.ಎಸ್. ಮಡಿ, ಕಾರ್ಯದರ್ಶಿಗಳು: ಶ್ರೀ ಪಿ. ಜೆ. ಬಾಗಿಲ್ತಾಯ, ಪ್ರೊ। ಡಿ. ಪ್ರಹ್ಲಾದಾಚಾರ್ಯ, ಪ್ರೊ। ಎನ್. ವಜ್ರಕುಮಾರ್, ಡಾ। ಎಂ. ಎಸ್. ಆಳ್ವ, ಶ್ರೀ ಕೆ. ನಾರಾಯಣದಾಸ್, ಶ್ರೀ ಶ್ರೀಕಾಂತ ಕೆಮ್ತೂರ್, ಶ್ರೀ ಕೆ. ಎಲ್. ರಾಮನಾಥ್ ಭಟ್, ಶ್ರೀ ಯು. ಕೇಶವ ಆಚಾರ್.)

ಈ ಗ್ರಂಥದ ಮುಖಪುಟ ವಿನ್ಯಾಸ ರಚಿಸಿದವರು ಹಿರಿಯ ಕಲಾವಿದ ಶ್ರೀ ರಮೇಶ ರಾವ್, ಉಡುಪಿ.

ಈ ಗ್ರಂಥದ ಸಂಪಾದನೆಯ ಸಂದರ್ಭದಲ್ಲಿ ನಮಗೆ ನೆರವು ನೀಡಿದವರು ಶ್ರೀ ರಘು ರಾಮಾಚಾರ್ಯ ಪೇಜಾವರ ಮಠ, ಉಡುಪಿ, ಪ್ರೊ। ನಿ. ಶ್ರೀಶ ಬಲ್ಲಾಳ, ಅಂಬಲಪಾಡಿ, ಉಡುಪಿ, ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯ ಸಂಸ್ಕೃತ ಕಾಲೇಜು, ಉಡುಪಿ, ಶ್ರೀ ಬನ್ನಂಜೆ ಗೋವಿಂದಾಚಾರ್ಯ, ಉಡುಪಿ, ಶ್ರೀ ಟಿ. ಮೋಹನದಾಸ ಪೈ, ಮಣಿಪಾಲ, ಶ್ರೀ ಟಿ. ಸತೀಶ ಯು. ಪೈ, ಮಣಿಪಾಲ ಪವರ್‌ಪ್ರೆಸ್, ಮಣಿಪಾಲ, ಶ್ರೀ ಎ. ಹರಿದಾಸ ಭಟ್ಟ, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು, ಹಾಗೂ ಪೇಜಾವರ ಸ್ವಾಮೀಜಿಯವರ ಮಾರ್ಗದರ್ಶನ ಪಡೆಯುತ್ತಿರುವ ಸಂಸ್ಥೆಗಳ ಆಡಳಿತ ಮಂಡಳಿಯವರು.

ನಮ್ಮ ವಿನಂತಿಯ ಮೇರೆಗೆ ಈ ಗ್ರಂಥಕ್ಕಾಗಿ ಹೊಸ ಲೇಖನಗಳನ್ನು ಬರೆದು ಕೊಟ್ಟವರು- ಡಾ। ಎಂ. ಪ್ರಭಾಕರ ಜೋಶಿ, ಪ್ರೊ। ಪಿ. ಶ್ರೀಪತಿ ತಂತ್ರಿ, ಶ್ರೀ ರಾಜಾರಾಮ ತೋಳ್ಪಾಡಿ, ಶ್ರೀ ಲಕ್ಷ್ಮೀಶ ತೋಳ್ಪಾಡಿ, ಶ್ರೀ ಎಂ. ಎನ್. ಪ್ರಭು, ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವ, ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯ, ಡಾ। ಬಿ. ಆರ್. ನಾಡಗೌಡ, ಶ್ರೀ ಶ್ರೀನಿವಾಸ ವರಖೇಡಿ, ಶ್ರೀ ವಾದಿರಾಜ ಪಂಚಮುಖಿ, ಶ್ರೀ ವಿಶ್ವಪ್ರಸನ್ನತೀರ್ಥರು, ಶ್ರೀ ವಿದ್ಯಾಪ್ರಸನ್ನತೀರ್ಥರು, ಡಾ। ರಾಮಕೃಷ್ಣ ಜೋಶಿ, ಶ್ರೀ ಅರುಣಾಚಲ ಹೆಬ್ಬಾರ್, ಡಾ। (ಶ್ರೀಮತಿ) ಶ್ರೀರಾಮ ಹರ್ಲೆಕರ, ಡಾ। ಸಿ. ಎಚ್. ಶ್ರೀನಿವಾಸ ಮೂರ್ತಿ, ಶ್ರೀ ಎ. ಹರಿದಾಸ ಭಟ್ಟ. ಶ್ರೀ ಬಿ. ಎನ್. ರಾಘವೇಂದ್ರಾಚಾರ್ಯ, ಪ್ರೊ। ಎಂ. ಆರ್. ಹೆಗಡೆ – ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳು (ನೋಡಿ- ಅನುಬಂಧ- ೧೧-೮).

ಈ ಗ್ರಂಥದ ಸಂಪಾದಕರಾದ ನಾವು (ಮುರಳೀಧರ ಉಪಾಧ್ಯ ಹಿರಿಯಡಕ, ಹೆರಂಜೆ ಕೃಷ್ಣ ಭಟ್ಟ.) ವಿದ್ಯಾರ್ಥಿಗಳಾಗಿದ್ದಾಗ, ಶ್ರೀ ವಿಶ್ವೇಶತೀರ್ಥರ ಪರ್ಯಾಯ ಕಾಲದಲ್ಲಿ ಮಠದಲ್ಲಿ ಊಟ ಮಾಡುತ್ತ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತ ಬೆಳೆದವರು. ಅನ್ನದ ಋಣ ತೀರಿಸಲು ಸಾಧ್ಯವಿಲ್ಲ. ಅನ್ನದ ಋಣವನ್ನು ನೆನಪಿಸಿಕೊಂಡು, 'ಪೇಜಾವರ ಪ್ರಶಸ್ತಿ' ಗ್ರಂಥವನ್ನು ಅರ್ಪಿಸುತ್ತ, ಶ್ರೀ ವಿಶ್ವೇಶತೀರ್ಥ ಶ್ರೀಪಾದರಿಗೆ ಅಭಿವಂದನೆಗಳನ್ನು ಸಲ್ಲಿಸುತ್ತೇವೆ. ●

೪ - ೧

# ಮೂರು ಪರ್ಯಾಯ, ನೂರು ಸಾಧನೆ

ಪಡುವಲ ಕಡಲಕಿನಾರೆಯಲ್ಲಿ ಶಂಖಶಿಂಪುಗಳಷ್ಟೇ ಮುತ್ತುರತ್ನಗಳೂ ಚೆಲ್ಲುವರಿದಿದೆ. ''ಸಾಕಂಗ್ರಾವಗಣೈರ್ಲುಠಂತಿಮಣಯಃ ತೀರೇಽರ್ಕ ಬಿಂಬೋಪಮಾಃ'' ಆ ಮಣಿ ಮುತ್ತುಗಳಲ್ಲಿ ನಮಗೆ ಸಿಕ್ಕಿದ್ದು ಹಲವು ಮಾತ್ರ. ದಕ್ಕಿದ್ದು ಕೆಲವು ಮಾತ್ರ. ಆ ಮಣಿಶ್ರೇಣಿಗೆ ಮುಕುಟ ಮಣಿ ಆಚಾರ್ಯ ಮಧ್ವರು ಒಂದು ಕೌಸ್ತುಭ ರತ್ನ. ಶ್ರೀ ವಿಷ್ಣುತೀರ್ಥರು ಮತ್ತೊಂದು ಮುತ್ತು. ಶ್ರೀ ವಾದಿರಾಜರು, ತ್ರಿವಿಕ್ರಮ ಪಂಡಿತರು, ನಾರಾಯಣ ಪಂಡಿತರು, ವೃಂದಾವನಚಾರ್ಯರು ಅದೇ ಮಂಜೂಷಿಕೆಯ ಮಣಿಮುತ್ತುಗಳು.

ಇತ್ತೀಚೆಗೆ ಶ್ರೀ ಪಲಿಮಾರು ಮಠಾಧೀಶರು ಶ್ರೀ ಪೇಜಾವರ ಶ್ರೀಗಳು, ಶಿವರಾಮ ಕಾರಂತ, ಮಾಧವ ಪೈಗಳಂಥ ಮಣಿ ಮಾಣಿಕ್ಯ ಮೌಕ್ತಿಕಗಳನ್ನು ಪ್ರಪಂಚಕ್ಕೆ ಕಾಣಿಕೆಯಾಗಿ ನೀಡಿ ಪಡುವಲ ಕಡಲು ತನ್ನ ಒಡಲು ಇನ್ನೂ ಬಡವಾಗಿಲ್ಲ ಎಂದು ತೋರಿಸಿಕೊಟ್ಟಿದೆ. ಅವರಲ್ಲಿ ಕಾರಂತರು ತಮ್ಮ ಸಾಹಿತ್ಯದ ಸೌಹಿತ್ಯದಿಂದ ಗೌರವದ ಗಗನಗೋಪುರಕ್ಕೆ ಏರಿದರೆ ಮಾಧವ ಪೈಗಳು ಅರ್ಥಸಂಪದದ ಸಂಪಾತಿಯಾಗಿ ಘನತೆಯ ಗೌರೀಶಂಕರಕ್ಕೆ ಉಡ್ಡಾಣ ಮಾಡಿದರು. ಆದರೆ ಶ್ರೀ ಪೇಜಾವರ ಶ್ರೀಗಳವರು ಆ ಅರ್ಥ, ಸಾಹಿತ್ಯ ಎರಡಕ್ಕೂ ಧರ್ಮ ದೀಕ್ಷೆ ಕೊಟ್ಟು ಅವೆರಡನ್ನೂ ಪುರುಷಾರ್ಥ ಸಾಧನೆಯಾಗಿ ದುಡಿಸಿಕೊಂಡು ಶಿಷ್ಟ ವಿಶಿಷ್ಟ ವ್ಯಕ್ತಿಯಾಗಿ ನಾಡುನುಡಿಗಳ ಶಕ್ತಿಯಾಗಿ ಬೆಳೆದು ನಿಂತುಕೊಂಡಿದ್ದಾರೆ.

ಈ ಕಿರುಮೂರ್ತಿ ಹತ್ತಿದ ಎತ್ತರ ಚಿಕ್ಕೆ ಚಂದ್ರಾಮರ ಹತ್ತರ, ಹತ್ತರ. ಇವರ ಎತ್ತರ ಬಿತ್ತರಕ್ಕೆ ಏರುವಲ್ಲಿ ಇತರ ಯತಿಗಳು ತತ್ತರ ಎತ್ತೆತ್ತರ. ಇಷ್ಟಾದರೂ ಗರ್ವದ ಗರಿಕೆ ಮೊಳೆತಿಲ್ಲ, ಜಂಭಕ್ಕೆ ಇವರಲ್ಲಿ ಇಂಬಿಲ್ಲ.

ಈ ಹಿಡಿದೇಹದಲ್ಲಿ ಇಷ್ಟು ಗುಣಗಳು ಹಿಡಿಸಿದ್ದಾದರೂ ಹೇಗೆ! ಇವರ ತಲೆ ಬರೀ ಕೂದಲು ಬೆಳೆಯುವ ಹೊಲವಲ್ಲ. ಹೊಸ ಹೊಸ ವಿಚಾರ ಬೆಳೆಯುವ ನೆಲ. ಇವರ ಕಣ್ಣು ಹೊರಗಿನ ವಸ್ತುಗಳ ಕಾಣಿಸುವ ಬರಿ ಗೋಲಕವಲ್ಲ, ಭಗವಂತನ ವಿಶ್ವರೂಪವನ್ನು ಸೆರೆ ಹಿಡಿಯುವ ಒಂದು ಕ್ಯಾಮರಾ. ಹೃದಯ ಬರೀ ಉಸಿರು ಊದುವ ತಿದಿಯಲ್ಲ, ದೀನದಲಿತರ ಸುಖದುಃಖಗಳಿಗೆ ಸ್ಪಂದಿಸುವ ಕೋಮಲಾಂಗ .

ಇವರ ಮುಖ ತೇಜದ ತಳಿಗೆ, ಮಿದುಳು ಜ್ಞಾನದ ಮಳಿಗೆ, ಮೈ ಮಿಂಚಿನ ಮಂಚ, ಕೈ ಕಲ್ಪತರು, ಸ್ವಯಂ ಜ್ಞಾನಮೇರು.

ಭಾಷಣಕ್ಕೆ ನಿಂತರೆ ಬ್ರಹಸ್ಪತಿ, ವಾಕ್ಯಾರ್ಥಕ್ಕೆ ಇಳಿದರೆ ವಾಚಸ್ಪತಿ. ಇಷ್ಟಾದರೂ ಅಹಂಕಾರದ ಹುಂಕಾರವಿಲ್ಲ. ಯಾರಿಗೆ ಏನು ಬರುವದು! ಎಂಬ ಕಿಂಕಾರವಿಲ್ಲ.

ಇವರ ಕಮಂಡಲ ತುಂಬ ಕರುಣರಸ, ಹೃದಯ ತುಂಬಿ ಹೊರ ಸೂಸಿದ್ದೆ ಕಮಂಡಲ ತುಂಬಿದೆ. ಅಂತರಂಗ ತುಂಬಿ ಹೊರಹೊಮ್ಮಿದೆ, ಜನಾನುರಾಗ. ಅದೇ ಶಾಟಿಯಲ್ಲಿಯೂ ಮೈಚಾಚಿದೆ. ಯಾರನ್ನೂ ಎಂದೂ ದಂಡಿಸದ ಇವರ ಕೈಯಲ್ಲಿ ದಂಡ ಇದ್ದುದೇ ದಂಡ. ಕಾಮಕ್ರೋಧಾದಿಗಳನ್ನು ಓಡಿಸಲು ಹಿಡಿದಿರುವವರೋ ಏನೋ!

ಪರಸ್ತ್ರೀ ನೋಟದಲ್ಲಿ ಇವರು ಕುರುಡರು. ಪರನಿಂದೆಯಲ್ಲಿ ಮೂಕರು. ಹೆರವರ ನಿಂದಾಸ್ತುತಿಗಳಿಗೆ ಕಿವುಡರು. ಅಧಿಕಾರಿಗಳ ಬಳಿ ಸಾರಲು ಕುಂಟರು. ಶ್ರದ್ಧಾ ಜಡರು, ಭಕ್ತಿಲಂಪಟರು, ಧ್ಯಾನದ ಗುಂಗಿನವರು. ಜ್ಞಾನದ ಹಂಬಲದವರು, ಪೂಜೆಯ ಹುಚ್ಚಿನವರು,

ನಾಕು ವೇದ ಇವರ ನಾಲಿಗೆಯ ತುದಿಯಲ್ಲಿ, ಆರು ಶಾಸ್ತ್ರಗಳು ಅಂಗೈನೆಲ್ಲಿ. ಹದಿನೆಂಟು ಪುರಾಣಗಳು ಸ್ಥಿತಿ ಪಥದಲ್ಲಿ.

ಇವರ ಮಿದುಳಿನ ಮೈದಾನದಲ್ಲಿ ತಿಳಿವಿನ ತಡಸಲುಗಳೆಲ್ಲ ತುಳುಕಾಡಿವೆ. ಇವರ ಮಾತಿನಲ್ಲಿ ಜ್ಞಾನಧಾರೆಗಳೆಲ್ಲವೂ ಮಡುಗಟ್ಟಿವೆ.

ಇವರ ಸಂವಾದದಲ್ಲಿ ಸೊದೆಯ ಸ್ವಾದಿಮೆ, ವಾಚೋವೀಚಿಗಳಲ್ಲಿ ಮಧುವಿನ ಮಧುರಿಮೆ, ಮನಸ್ಸಿನಲ್ಲಿ ನವನೀತದ ಮೃದಿಮೆ, ಸ್ವಭಾವದಲ್ಲಿ ಸಾಧಿಮೆ, ಗುಣಗಳಲ್ಲಿ ಗರಿಮೆ, ಹೃದಯದಲ್ಲಿ ಹಿರಿಮೆ, ವಿದ್ಯೆಯಲ್ಲಿ ಜಾಣ್ಮೆ ಮುಂತಾದ ಗುಣಗಳು ಮಾನವನ ಕುಲಕದಲ್ಲಿ ಇವರ ಮೇಲ್ಮೆಯನ್ನು ಎತ್ತಿ ತೋರಿಸುತ್ತಿವೆ.

ಪೇಜಾವರ ಶ್ರೀಗಳಲ್ಲಿ ಆಡಂಬರದ ದೊಂಬರಾಟವಿಲ್ಲ. ಬೇಕಾದಷ್ಟು ಬಂಗಾರ ದಾನವಿತ್ತಿದ್ದರೂ ಯಾವ ಉಂಗುರಕ್ಕೂ ಇವರ ಅಂಗುಲಿಯನ್ನು ಶೃಂಗರಿಸುವ ಭಾಗ್ಯವಿಲ್ಲ. ರಜತಪೀಠದಲ್ಲಿದ್ದರೂ ಕೂಡುವದು ಕಾಷ್ಠಾಸನ, ಮಲಗುವುದು ಚರ್ಮಾಸನ, ಸಾವಿರಾರು ಜರದ ಶಾಲುಗಳನ್ನು ಗಣ್ಯರಿಗೂ, ಪಂಡಿತಾಗ್ರಣ್ಯರಿಗೂ ಹೊದಿಸಿದ್ದಾರೆ. ಆದರೆ ತಾವು ಹೊದೆಯುವುದು ಬರಿ ಖದ್ದರದ ಕಾವಿ ಮಾತ್ರಾ. ಅವರಲ್ಲಿ ದಂಡ ಇದೆ, ದಂಡನ ಇಲ್ಲ. ಆವಿಗೆ ಇದೆ, ತುಳಿತ ಇಲ್ಲ. ಪಾಂಡಿತ್ಯ ವಿದೆ, ಚಾಂಡಿತ್ಯವಿಲ್ಲ. ದರ್ಶನ ಇದೆ, ಪ್ರದರ್ಶನ ಇಲ್ಲ. ಅನುರಾಗ ಇದೆ, ರಾಗ ಇಲ್ಲ. ಸ್ನೇಹ ಇದೆ, ಮೋಹ ಇಲ್ಲ. ಇವರ ಬಣ್ಣ ತೇಜಾಪ ಹಾಕಿದ ಬಂಗಾರ. ಮುದ್ದು ಮುಖಕ್ಕೆ ದೃಷ್ಟಿ ತೆಗೆದಂತೆ ಹಣೆ ಉದ್ದಕೂ ಎದ್ದು ನಿಂತಿದೆ ಅಂಗಾರ. ಅದರ ಕೆಳಗಿನ ಅಕ್ಷತೆ ಆ ಅಂಗಾರಕ್ಕೊಂದು ಶೃಂಗಾರ. ಹತ್ತು ಹುಣ್ಣಿವೆ ಹೂತಂತಿರುವ ಕಣ್ಣಿವೆ. ತುಟಿ ತಟದಲ್ಲಿ ಮಂದಹಾಸದ ಮಂದಾರ. ಅವರ ಕಂಗಳು ಮಂಗಳ ದೃಷ್ಟಿಯ ಅಂಗಳ. ದಯಾ-ದಾಕ್ಷಿಣ್ಯ ಪ್ರವಾಹಗಳ ಗಂಗೋತ್ರಿ.

ಇವರು ಹುಟ್ಟಿದ ಊರನ್ನು ನಕಾಶದಲ್ಲಿ ದುರ್ಬಿಣಿ ಹಚ್ಚಿ ನೋಡಬೇಕು. ಪರಶುರಾಮ ಕ್ಷೇತ್ರ, ರಾಮ ಕುಂಜ. ರಾಮಕುಂಜದಲ್ಲಿ ಅರಳಿದ ಈ ಪುಷ್ಪ ಉಡುಪಿ ಕೃಷ್ಣನ ಪಾದಕಂಜಗಳಿಗೆ ಅರ್ಪಿತವಾದದ್ದು ಒಂದು ಯೋಗಾಯೋಗ, ಯಶಸ್ವಿ ಪ್ರಯೋಗ. ರಾಮಕುಂಜದ ಪುಣ್ಯ ಪುಂಜವೆ ಪರಿಪಾಕಗೊಂಡು ಆ ಹಳ್ಳಿಯಲ್ಲಿ ಈ ವಿಭೂತಿ ಪುರುಷ ಹುಟ್ಟಿದ. ನಾಡಿಗೇ ಕೀರ್ತಿಯ ಕಾಮನಬಿಲ್ಲಿನ ತೋರಣ ಕಟ್ಟಿದ.

ಹುಟ್ಟಿದಾಗ ಹಡೆದವರು ಇಟ್ಟ ಹೆಸರು ವೆಂಕಟರಮಣ. ಶ್ರೀ ರಾಘವೇಂದ್ರ ಸ್ವಾಮಿಗಳ ಪೂರ್ವಾಶ್ರಮದ ಹೆಸರೂ ವೆಂಕಟರಮಣ.

ಒಮ್ಮೆ ವೆಂಕಟರಮಣ ತಂದೆಯೊಂದಿಗೆ ಉಡುಪಿಗೆ ಹೋಗಿದ್ದ. ಶ್ರೀಕೃಷ್ಣನ ಪರ್ಯಾಯದ ವೈಭವ ಹುಡುಗನನ್ನು ಆಕರ್ಷಿಸಿತು. ಹುಡುಗ ಕೃಷ್ಣನನ್ನೆ ಆಕರ್ಷಿಸಿದ. ಕೃಷ್ಣನ ಪ್ರೇರಣೆ ಪೇಜಾವರದ

ಶ್ರೀ ವಿಶ್ವಮಾನ್ಯತೀರ್ಥರಿಗೆ. ಕಣ್ಣಿನಿಂದಲೇ ಕಾಂತಿಯನ್ನು ಸೂಸುವ, ಶಾಂತಿಯನ್ನು ಬೀಸುವ, ಎದುರಿದ್ದವರ ಅಂತರಂಗವನ್ನು ಸೋಸುವ, ಮುಗುಳನಗೆಯ ಮಲ್ಲಿಗೆಗಳನ್ನು ಹಾಸುವ ಆ ಹಸುಳೆಯನ್ನು ಹಿಡಿದು ಕೇಳಿಬಿಟ್ಟರು.

''ನನ್ನಂತೆ ನೀನೂ ಸ್ವಾಮಿಯಾಗುವೆಯಾ ?''

''ಓಹೋ ! ಆನಂದದಿಂದ ಆಗುವೆನು'' ಎಂದು ಉತ್ಸಾಹದಿಂದ ಹೇಳಿತು ಆ ಹಸುಳೆ.

ಆ ಪುಟ್ಟ ಹುಡುಗನ ದಿಟ್ಟ ಉತ್ತರ ಕೇಳಿದ ಸ್ವಾಮಿಗಳು ಬೊಟ್ಟು ಕಚ್ಚಿದರು. ಹಸುಗೂಸಿನ ಆ ಉತ್ತರ ಹಸುವಿನಂಥ ಸ್ವಾಮಿಗಳ ಎದೆಯ ಕದತಟ್ಟಿತು. ಅಂತಃಕರಣ ಮುಟ್ಟಿತು. ಆ ನಗುವ ಮಗು ಸ್ವಾಮಿಗಳ ಕಣ್‌ಕಂಬದ ಗೊಂಬೆಯಾದ, ಆ ಬಿಂಬದ ಪ್ರತಿಬಿಂಬವಾದ.

ವೆಂಕಟರಮಣನಿಗೆ ಎಂಟು ವರ್ಷವಾದಾಗ ಸ್ವಾಮಿಗಳು ತಂದೆಗೆ ಗಂಟುಬಿದ್ದು ಕರಿಸಿಕೊಂಡರು. ಹಂಪಿಯ ಯಂತ್ರೋದ್ಧಾರ ಹನುಮಂತ ದೇವರ ಎದುರು ವೆಂಕಟರಮಣನಿಗೆ ಸನ್ಯಾಸಾಶ್ರಮವಿತ್ತು 'ವಿಶ್ವೇಶತೀರ್ಥ' ಎಂದು ನಾಮಕರಣ ಮಾಡಿದರು. ಪುಟ್ಟ ಮಗು ಪಟ್ಟವೇರಿತು. ಪ್ರಾಣದೇವರೇ ಒಳಗೆ ನಿಂತು ಪ್ರಣವೋಪದೇಶಗೈದರು. ''ನನ್ನ ಸಂಸ್ಥಾನವನ್ನು ಯಶಸ್ವಿಯಾಗಿ ಆಳು'' ಎಂದು ಹರಸಿದರು.

ಸಮೀಪದಲ್ಲಿಯೇ ನವವೃಂದಾವನ. ಆ ಯತಿವೃಂದದ ಆಶೀರ್ವಾದದ ಧಾರೆಗಳೆಲ್ಲವೂ ಈ ಕುಮಾರ ಸ್ವಾಮಿಯೆಡೆ ಹರಿದು ಬಂದವು. ಪುರಂದರ ಮಂಟಪದಲ್ಲಿಯೇ ಆಶ್ರಮವಾದುದರಿಂದ ಅವನ ಮೇಲೆ ದಾಸಧುರಂಧರರ ಅನುಗ್ರಹದ ಧಾರಾಸಂಪಾತವಾಗಲು ತಡವಾಗಲಿಲ್ಲ. ಯಂತ್ರಯುಗದ ಉದ್ಧಾರಕ್ಕಾಗಿ ಯಂತ್ರೋದ್ಧಾರ ಪ್ರಾಣದೇವರೇ ಈ ಪುಟ್ಟ ಪರಿವ್ರಾಜಕನಿಗೆ ಮಂತ್ರ ಹೇಳಿಕೊಟ್ಟರು. ಸ್ಥಗಿತವಾಗಿ ನಿಂತುಕೊಂಡ ಧರ್ಮಚಕ್ರದ ಗಾಲಿಯಂತ್ರಗಳಿಗೆ ಪುನಶ್ಚಾಲನೆ ಕೊಡುವ ತಂತ್ರವನ್ನೂ ತಿಳಿಸಿಕೊಟ್ಟರು. ತುಂಗಾತೀರದ ಆ ಯಂತ್ರೋದ್ಧಾರ ಪ್ರಾಣದೇವರ ಮಾನಸಪುತ್ರರೇ ಈಗಿನ ಈ ಪೇಜಾವರ ಶ್ರೀಗಳವರು.

ಪ್ರಪ್ರಥಮವಾಗಿ ಸಾಂದೀಪನಿ ಆಶ್ರಮಕ್ಕೆ ಕೃಷ್ಣನ ಪ್ರಯಾಣದಂತೆ ಭಂಡಾರಕೆರೆ ಶ್ರೀ ವಿದ್ಯಾಮಾನ್ಯ ತೀರ್ಥರ ಬಳಿಗೆ ವಿಶ್ವೇಶತೀರ್ಥರ ಪ್ರಯಾಣ. ಅಲ್ಲಿ ಮಾಧ್ವರಾದ್ಧಾಂತ ಸಂವರ್ಧಿನೀ ಸಭೆ. ದಿಗ್ದೇಶ ಗಳಿಂದ ಪಂಡಿತಪುಂಡರೀಕರ ಆಗಮನ. ವಿದ್ವದ್ ವಿಭೂತಿಗಳ ಸಂಗಮನ. ಆ ಸಭೆಯ ಅಧ್ಯಕ್ಷ ಪಟ್ಟ ಪುಟ್ಟ ಪರಿವ್ರಾಜಕ ವಿಶ್ವೇಶತೀರ್ಥರಿಗೆ.

ಶಾರ್ದೂಲವಿಕ್ರೀಡಿತ ಛಂದಸ್ಸಿನಲ್ಲಿ ಸ್ವರಚಿತವಾದ ಸಂಸ್ಕೃತ ಶ್ಲೋಕಗಳಿಂದಲೇ ಅಧ್ಯಕ್ಷೀಯ ಭಾಷಣ ಪ್ರಾರಂಭ, ಭಾಷಣ ಕೇಳಿದ ವಿದ್ವಾಂಸರೆಲ್ಲರೂ ಮಂತ್ರಮುಗ್ಧ. ಸಭಿಕರೆಲ್ಲರೂ ಸ್ನೇಹಸ್ನಿಗ್ಧ. ಸಭಾಸಂಯೋಜಕರಾದ ಸ್ವಾಮಿಗಳು ಕೂಡ ವಿಸ್ಮಯಸ್ತಬ್ಧ. ಇದು ಪೇಜಾವರ ಶ್ರೀಗಳವರ ಮೊಟ್ಟಮೊದಲನೆಯ ವಾಗ್ವೈಭವದ ಪ್ರಥಮ ದಿಗ್ವಿಜಯ.

ಅನಂತರ ಎಂಟು ವರ್ಷಗಳ ಕಾಲ ಗುರುಕುಲ ವಾಸ, ಸತತ ಶಾಸ್ತ್ರಾಭ್ಯಾಸ. ಹಗಲಿರುಳೂ ಶ್ರವಣ ಮನನ ನಿಧಿಧ್ಯಾಸ. ಆ ಎಂಟು ವರ್ಷಗಳಲ್ಲಿ ನೂರೆಂಟು ಗ್ರಂಥಗಳ ವ್ಯಾಸಂಗ.

ಎಂಟು ವತ್ಸರ ಕಾಲ ಅಖಂಡವಾಗಿ ಮಾಡಿದ ನಿರಂತರ ವ್ಯಾಸಂಗದಿಂದ ಅವರೊಬ್ಬ 'ಪುಟ್ಟ ಪಾಣಿನಿ', 'ದಿಟ್ಟ ದೇಶಿಕ', 'ನೂತನ ಗೌತಮ', 'ಉದಯೋನ್ಮುಖ ಉದಯನ', 'ಅಭಿನವ ಗದಾಧರ', 'ಅಣು ಮಣಿಕಾರ', 'ದೀಧಿತಿಯ ಅಧೀತಿ', 'ಕುಮಾರ ಕುಮಾರಿಲ' ಎಂದು ಕರೆಯುವಷ್ಟು ನ್ಯಾಯ, ವೇದಾಂತ, ಮೀಮಾಂಸಾ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ಪ್ರಕಾಂಡ ಪಾಂಡಿತ್ಯದಿಂದ ಮಂಡಿತರಾದರು. ಅಗ್ರಮಾನ್ಯ ಪಂಡಿತರಾದರು.

ಭಂಡಾರಕೆರೆ ಶ್ರೀಗಳಲ್ಲಿ ಬಾಧಾಂತ ನ್ಯಾಯ, ಸುಧಾಂತ ವೇದಾಂತ, ಭಾಷ್ಯಾಂತ ವ್ಯಾಕರಣ ಓದಿ

ಶ್ರೀ ವಿಶ್ವೇಶತೀರ್ಥರು ಸ್ವಯಂ ಜ್ಞಾನಭಾಂಡಾರರೇ ಆದರು. ತಾವು ಓದಿದ ಶ್ರೀಮನ್ನ್ಯಾಯಸುಧೆಯ ಮಂಗಳ ಮಹೋತ್ಸವವನ್ನು ಆಚಾರ್ಯರ ಅವತಾರ ಕಾರ್ಯದ ಅಂಗಳವಾದ ಉಡುಪಿಯ ಶ್ರೀಕೃಷ್ಣನ ಸನ್ನಿಧಾನದಲ್ಲಿಯೇ ನೆರವೇರಿಸಿದರು. ಆಗ ಆರು ಗಂಟೆಗಳ ಕಾಲ ಗುರುಶಿಷ್ಯರಿಬ್ಬರಿಗೂ, ಜಯತೀರ್ಥ ಚಂದ್ರಿಕಾಚಾರ್ಯ ರಾಘವೇಂದ್ರ ಸ್ವಾಮಿಗಳೊಂದಿಗೆ ಮುಖಾಮುಖಿ. ಬೌದ್ಧ ಚಾರ್ವಾಕ ಮಾಯಾವಾದಿಗಳೊಂದಿಗೆ ಹಣಾಹಣಿ. ಕೊನೆಗೆ ಜಯತೀರ್ಥರ ಜಯಭೇರಿ ಬಾರಿಸಿ ಬಿಟ್ಟರು. ಇಬ್ಬರೂ ಸುಧಾಸಾಗರದಲ್ಲಿ ಮುಳುಗಿದರು. ಶ್ರಾವಕರು ಆನಂದ ಸಾಗರದಲ್ಲಿ ಮುಳುಗಿದರು. ಜ್ಞಾನಸಾಗರದಲ್ಲಿ ಈಸಾಡಿದರು.

ಅಷ್ಟರಲ್ಲಿ ಪರ್ಯಾಯ ಕಾಲ ಸನ್ನಿಹಿತ. ಪರ್ಯಾಯ ಎಂದರೆ ಸ್ವಾಮಿಗಳಿಗೆ ಮೌಕ್ತಿಕ ಆನಂದಾನುಭವದ ಅಪರ ಪರ್ಯಾಯ. ಶ್ರೀಗಳವರ ಕರ್ತೃತ್ವ ಶಕ್ತಿಗೆ ಪರ್ಯಾಯವಾಗಿ ಸವಾಲಿದ್ದಂತೆ.

ಪರ್ಯಾಯ ಪೂರ್ವಭಾವಿ ಸಂಚಾರಕ್ಕಾಗಿ ಕರ್ನಾಟಕದ ರಾಜಧಾನಿ ಬೆಂಗಳೂರಿಗೆ ಆಗಮನ. ಅಲ್ಲಿ ಪಂಡಿತೋತ್ತಮ ಪೀಠಾಧಿಪತಿಗಳಾದ ಉತ್ತರಾದಿ ಮಠಾಧೀಶರ ಸುಧಾಮಂಗಳಕ್ಕೆ ಆಹ್ವಾನ. ವಿಭುದ್ವಯ ಸಂಯೋಗ. ಉತ್ತುಂಗ ಶೃಂಗಗಳೆರಡರ ಸಂಗಮ. ವಾಕ್ಯಾರ್ಥ ಪ್ರಾರಂಭ. ಸುಧೆಯ ಸ್ವಾದಿಮೆಯನ್ನು ಹಂಚುವ ಸಮಾರಂಭ. ಕೋಟಿಕ್ರಮಗಳ ಉಪಕ್ರಮ, ಇಬ್ಬರದೂ ಒಂದೊಂದು ವಿಕ್ರಮ. ಶಾಸ್ತ್ರದಲ್ಲಿ ಉಭಯತರದೂ ಸತ್ಯಪರಾಕ್ರಮ. ಒಬ್ಬರಿಂದ ಜಯತೀರ್ಥರ ಉಕ್ತಿಗಳ ಸ್ವಾರಸ್ಯದ ಆವಿಷ್ಕಾರ. ಇನ್ನೊಬ್ಬರಿಂದ ಸುಧಾದ ಯುಕ್ತಿಗಳ ಪರಿಷ್ಕಾರ. ಇಬ್ಬರೂ ಸಹೃದಯರು, ಇಬ್ಬರೂ ಸುಪ್ರತಿಪನ್ನರು. ಸಮಾನಾಧಿಕರಣ ವಾಕ್ಯಾರ್ಥದಿಂದ ಇಬ್ಬರಿಗೂ ಸಂತಸ, ಸಮಾಧಾನ. ಕೊನೆಗೆ ಎಲ್ಲವೂ ಮಧುರೇಣ ಸಮಾಪಯೇತ್ ಆಗಿ ಪರಸ್ಪರ ಪುರಸ್ಕಾರ.

ನಂಜನಗೂಡಿನಲ್ಲಿ ಆಗಮತ್ರಯ ಸಮ್ಮೇಳನ. ಮತತ್ರಯದ ಮಹಾಮಹಾ ಮನೀಷಿಮತರ್ದಿಕರ ಮೇಲನ, ಅದರ ದಕ್ಷ ಅಧ್ಯಕ್ಷತೆಯ ಪಟ್ಟ ಈ ಪುಟ್ಟ ಸ್ವಾಮಿಗಳಿಗೆ. ಅಂದು ವಿಶ್ವೇಶತೀರ್ಥರ ಭಾಷಣ ಸಾವಿರ ಸಾವಿರ ತಲೆಗಳನ್ನು ತೂಗಿಸಿತು. ಹತ್ತು ಸಾವಿರ ಕೈಗಳಿಂದ ಚಪ್ಪಾಳೆ ತಟ್ಟಿಸಿತು. ಪಂಡಿತರ ಬೆರಳ ಕಚ್ಚಿಸಿತು. ಪಾಮರ ಮನಸ್ಸನ್ನೂ ಮೆಚ್ಚಿಸಿತು. ಅಮೃತಮಯವಾದ ಶ್ರೀಗಳವರ ಭಾಷಣದಿಂದ ನಂಜನಗೂಡು ಅಮೃತ ಗೂಡಾಗಿ ಮಾರ್ಪಟ್ಟಿತು.

ಸಮ್ಮೇಳನದ ಉದ್ಘಾಟನೆಗೆ ಆಗಮಿಸಿದ ಮೈಸೂರ ಮಹಾರಾಜರು ವಿಶ್ವೇಶತೀರ್ಥರ ಮಾತಿನ ಮೋಡಿಗೆ ಮಂತ್ರಮುಗ್ಧರಾದರು. ವಿಸ್ಮಯಸ್ತಬ್ಧರಾದರು. ಮೈಸೂರಿಗೆ ದಯಮಾಡಿಸಬೇಕೆಂದು ವಿನಯದಿಂದ ಬಿನ್ನವಿಸಿದರು. ಸ್ವಾಮಿಗಳು ಅದನ್ನು ಮನ್ನಿಸಿದರು. ಕೃಷ್ಣನ ಪೂಜೆಯಿಂದ ಕೃಷ್ಣರಾಜ ಒಡೆಯರ ಅರಮನೆ ಪೂತಾವದಾತವಾಯಿತು. ರಾಮನ ಪೂಜೆಯಿಂದ ಮಂಗಳಧಾಮ ರಾಮಾರಾಮ ಎನಿಸಿತು.

ಪೇಜಾವರ ಶ್ರೀಗಳವರ ಪ್ರಥಮ ಪರ್ಯಾಯ ಅನೇಕ ದೃಷ್ಟಿಯಿಂದ ಪ್ರಪ್ರಥಮವಾಯಿತು. ಶ್ರೀವಾದಿರಾಜ ಸ್ವಾಮಿಗಳವರ ಅನಂತರ ಇಷ್ಟು ವೈಭವ ವಿಜೃಂಭಣೆಯಿಂದ ಜರುಗಿದ ಪರ್ಯಾಯವೆಂದರೆ ಶ್ರೀ ಪೇಜಾವರ ಶ್ರೀಗಳವರ ಪರ್ಯಾಯವೇ ಎಂದು ಜನ ಆಡಿಕೊಳ್ಳುವಂತಾಯಿತು.

ದಿಗ್ದೇಶಗಳಿಂದ ಜನಪ್ರವಾಹ ನುಗ್ಗಿ ಬಂದಿತು. ಆಗುಂಬೆಯಿಂದ ಅನಂತೇಶ್ವರದ ವರೆಗೆ ಭಕ್ತ ಭಾವುಕರ ಮಹಾಪೂರ ಹರಿದುಬಂದು ನಿಂತುಕೊಂಡಿತು. ತೇರು ಬೀದಿಯಲ್ಲಿ ತೇರೈಸಿಬರುವ ತರಕಾರಿ, ಹಣ್ಣುಹಂಪಲ ಅಕ್ಕಿಮುಡಿಗಳ ತಲೆ ಹೊರೆಗಳಿಗೆ ಉಡುಪಿಯ ಹಾದಿ-ಬೀದಿಗಳು ಸಾಲಲಿಲ್ಲ, ಕೃಷ್ಣ ಮಠದ ಕೋಟೀ ಕೋಣೆಗಳು ಹಿಡಿಸಲಿಲ್ಲ. ರಾಜಾಂಗಣದ ಬಯಲು ಆಲಯದಲ್ಲಿಯೇ ಪೇರಿಸಬೇಕಾಯಿತು.

ಪ್ರಥಮ ಪರ್ಯಾಯದಲ್ಲಿ ಶ್ರೀಗಳು ಕೈಗೊಂಡ ಪ್ರಥಮ ಕಾರ್ಯ ಸಾರ್ವತ್ರಿಕ ಅನ್ನದಾನ. ಅನ್ನಬ್ರಹ್ಮ ಎಂದು ಉಡುಪಿ ಶ್ರೀಕೃಷ್ಣನ ಖ್ಯಾತಿ. ಈ ಅನ್ನಬ್ರಹ್ಮದ ದೇಗುಲದಲ್ಲಿ ಬಂದವರಿಗೆ ನಿಂದವರಿಗೆ

ಮಧ್ವಸರೋವರದಲ್ಲಿ ಮಿಂದವರಿಗೆಲ್ಲ ಅನ್ನಸತ್ರ. ಅನ್ನಛತ್ರವನ್ನು ಪ್ರಾರಂಭಿಸಿದವರು ಶ್ರೀ ವಿಶ್ವೇಶತೀರ್ಥರೇ.

ಮೊದಲು ಸಂಸ್ಕೃತ ಕಾಲೇಜಿನಲ್ಲಿ ಕಲಿಯುವ ಛಾತ್ರರಿಗೆ ಮಾತ್ರ ಕೃಷ್ಣಮಠದಲ್ಲಿ ಊಟವಿದ್ದಿತು. ಪೇಜಾವರ ಶ್ರೀಗಳ ಪರ್ಯಾಯ ಪ್ರಾರಂಭವಾದ ಕೂಡಲೆ ಸಂಸ್ಕೃತ, ಆರ್ಟ್ಸ್, ಸಾಯನ್ಸ್, ಇಂಜಿನೀಯರಿಂಗ್, ಮೆಡಿಕಲ್ ಕಾಲೇಜುಗಳ ಮತ್ತು ಎಲ್ಲ ಪ್ರಾಥಮಿಕ ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿಗಳಿಗೂ ಎರಡೂ ಹೊತ್ತು ಸುಗ್ರಾಸ ಭೋಜನದ ಏರ್ಪಾಡು ಮಾಡಲಾಯಿತು. 'ಛಾತ್ರರೆಲ್ಲರೂ ಶ್ರೀ ಕೃಷ್ಣನ ಪ್ರಸಾದಕ್ಕೆ ಪಾತ್ರರು' ಎಂಬ ಸೂತ್ರವನ್ನು ಅನುಸರಿಸಲಾಯಿತು.

ಮುಂದೆ, ಅದೇ ಸಂಪ್ರದಾಯ ಮುಂದುವರಿದು ಅನ್ನದಾನ ಸುಸೂತ್ರವಾಗಿ ಅವಿಚ್ಛಿನ್ನವಾಗಿ ನಡೆದಿದೆ. ಗುಂಪುಗುಂಪಾಗಿ ಬರುವ ಎಲ್ಲ ಜಾತಿಯ ಎಲ್ಲ ಧರ್ಮದ ಯಾತ್ರಿಕರಿಗೂ ಕೃಷ್ಣನ ನೈವೇದ್ಯ ಲಭ್ಯವಾಯಿತು. ಸಕಲವಿಧ ಸೌಲಭ್ಯವನ್ನು ಕಲ್ಪಿಸಲಾಯಿತು.

ನಾಕು ಜನರಿಗೆ ಶ್ರೀಗಳು ಸುಧಾ ಪಾಠ ಹೇಳಿದ್ದರು. ಸುಧಾಮಂಗಳಕ್ಕೆ ನಾಕು ದಿನ ಉಳಿದಿದೆ. ಕೈಯಲ್ಲಿ ನಾಕು ಕಾಸೂ ಇಲ್ಲ. ರಿಕ್ತ ಹಸ್ತ. ಶ್ರೀಮಠದಲ್ಲಿ ಸುಧಾಮನ ಸಾನ್ನಿಧ್ಯ. ಇಷ್ಟಾದರೂ ಶ್ರೀಗಳು ಯೋಚನೆ ಮಾಡಲಿಲ್ಲ, ಯಾಚನೆ ಮಾಡಲಿಲ್ಲ. ಪ್ರಸಂಗಕ್ಕೆ ಸರಿಯಾಗಿ ಸೀತಾರಾಮರಾಯರು ಬಂದರು. ಮಂಗಳ ವೆಚ್ಚವನ್ನೆಲ್ಲ ತಂದರು, ಕೃಷ್ಣಾರ್ಪಣ ಎಂದರು.

ಕೆ. ವಿಠಲೋಪಾಧ್ಯಾಯ, ಯು. ವಾಸುದೇವಾಚಾರ್ಯ, ಕೆ. ವಾದಿರಾಜಾಚಾರ್ಯ, ಎಸ್. ಹಯಗ್ರೀವ ತಂತ್ರಿ ಎಂಬ ಚತುರಮತಿಗಳಾದ ಚತುಃಶಿಷ್ಯರಿಗೆ ಸುಧಾಪಾಠ ಹೇಳಿ ಮಂಗಳ ಮಾಡಿದರು. ಶತಾಯುಷಿ ಸುಧೀಂದ್ರ ತೀರ್ಥರು, ತಪೋನಿಧಿ ಕಾಣಿಯೂರು ಮಠದ ವಿದ್ಯಾವಾರಿಧಿ ತೀರ್ಥರ ಗುರುಗಳಾದ ವಿದ್ಯಾಮಾನ್ಯರು ಹಾಗೂ ಉಳಿದ ಮಠಾಧೀಶರು ಮತ್ತು ಕಟ್ಟೆ ಶ್ರೀನಿವಾಸಾಚಾರ್ಯ, ಪಡೆಮನ್ನೂರ ನಾರಾಯಣಾಚಾರ್ಯ, ಸಗರಿ ಹಯಗ್ರೀವಾಚಾರ್ಯ ಮುಂತಾದ ಪಂಡಿತ ಮಂಡಲಿಯ ಎದುರು ನಾಕು ಗಂಟೆ ಸ್ವರ್ಗಂಗಾ ಪ್ರವಾಹದಂತೆ ನಿರರ್ಗಳವಾಗಿ ಸುಧಾ ಅನುವಾದ ಸಾಗಿತ್ತು. ಶ್ರೀಗಳವರ ಬುದ್ಧಿಮಾಗಿತ್ತು. ಪಂಡಿತಮಂಡಲಿ ತಲೆದೂಗಿತ್ತು.

ನಾಕಾರು ಸಾವಿರ ಜನರಿಗೆ ಮೃಷ್ಟಾನ್ನ. ವಿದ್ಯಾರ್ಥಿಗಳಿಗೆ ಶಾಲುಶಕಲಾತಿ ಚಿನ್ನದ ತುಳಸೀಸರ. ''ಸುಧಾಯಾಃ ಶ್ರೀಕರತ್ವೇ ವಯಮಪಿಸಾಕ್ಷಿಣಃ।'' ಎಂದರು ಶ್ರೀಗಳು. ವಾದಿರಾಜರನ್ನು ನೆನೆದು ಪಂಡಿತರಿಗೆಲ್ಲ ಕೈತುಂಬ ದಕ್ಷಿಣೆ.

ಪ್ರಥಮ ಪರ್ಯಾಯ ಕಾಲದಲ್ಲಿ ಪೇಜಾವರ ಶ್ರೀಗಳು ಮಾಡಿದ ಮಹಾಮಹತ್ತರವಾದ ಕಾರ್ಯ ವೆಂದರೆ ಅಖಿಲ ಭಾರತ ಮಾಧ್ವ ತತ್ವಜ್ಞಾನ ಸಮ್ಮೇಲನ. ಮಠ ಮಠಗಳ ಅವಾಂತರ ಭೇದದಿಂದ ಒಡೆದು ಸಿಡಿದು ನಿಂತ ಕೂಪಮಂಡೂಕವಾಗಿ ಕುಳಿತ ಮಾಧ್ವರೆಲ್ಲರನ್ನೂ ''ಬಾಂಧವಾ ವಿಷ್ಣು ಭಕ್ತಾಶ್ಚ'' ಎಂಬ ಸ್ನೇಹಸೂತ್ರದಿಂದ ಒಂದುಗೂಡಿಸಿ ಒಂದು ವೇದಿಕೆಯಲ್ಲಿ ತಂದು ನಿಲ್ಲಿಸಿದ್ದು ಒಂದು ಪವಾಡವೆ ಎನ್ನಬೇಕು.

ಉತ್ತರಾದಿಮಠದ ಅರವತ್ತು ಜನ ವಿದ್ವಾಂಸರು ರಾಘವೇಂದ್ರ ಸ್ವಾಮಿ ಮಠದ ಗಣ್ಯಾಗ್ರಣ್ಯ ವೈದಿಕ ಲೌಕಿಕರು, ವ್ಯಾಸರಾಜ ಮಠದ ವಿದ್ವಾಂಸರು ಇಷ್ಟು ಪ್ರಚಂಡ ಪ್ರಮಾಣದಲ್ಲಿ ಘಟ್ಟ ಇಳಿದು ಬಂದದ್ದು ಇದೇ ಮೊದಲ ಸಲ.

ಉಡುಪಿಯ ಅಷ್ಟಮಠಾಧೀಶರಲ್ಲದೆ ಭಂಡಾರಕೇರೆ, ಸುಬ್ರಹ್ಮಣ್ಯ, ಭೀಮನಕಟ್ಟೆ, ಚಿತ್ರಾಪುರ ಮುಂತಾದ ಮಠಾಧೀಶರೂ ಅಲ್ಲದೆ ಗೌಡಸಾರಸ್ವತ ಸಮಾಜದ ಪರ್ತಗಾಳೀ ಮಠಾಧೀಶರೂ ದಯಮಾಡಿಸಿದ್ದರು. ಈ ಸಮ್ಮೇಳನ ಅಭೂತಪೂರ್ವ ಎನಿಸಿತು.

ಗೌಡಸಾರಸ್ವತ ಸಮಾಜದ ಎರಡುನೂರು ಸ್ವಯಂಸೇವಕರು ಹಗಲಿರುಳು ದುಡಿದು ಸಮ್ಮೇಳನದ ಯಶಸ್ಸಿಗಾಗಿ ಶ್ರಮಿಸಿದರು.

ನಾವು ಮಾಧ್ವರೆಲ್ಲರೂ ಒಂದು ಎಂಬ ಮಧುರ ಬಾಂಧವ್ಯದ ಸ್ನೇಹಸೂತ್ರದಿಂದ ಎಲ್ಲರ ಹೃದಯಗಳನ್ನು ಬೆಸೆದು ಸಮಗ್ರ ಮಾಧ್ವ ಸಮಾಜದಲ್ಲಿ ಸೌಹಾರ್ದದ ಸಾಮರಸ್ಯವನ್ನು ಮೂಡಿಸಿದ್ದು ಈ ಸಮ್ಮೇಳನದ ಮಹತ್ತರವಾದ ಸಾಧನೆ ಎನ್ನಬೇಕು.

ಮೈಸೂರು ಮಹಾರಾಜರು ಉದ್ಘಾಟಿಸಿದ ಈ ಸಮ್ಮೇಳನದಲ್ಲಿಯೇ ಇಂದು ಬೃಹದಾಕಾರವಾಗಿ ಬೆಳೆದು ನಿಂತ ಅಖಿಲ ಭಾರತ ಮಾಧ್ವ ಮಹಾಮಂಡಲದ ಸ್ಥಾಪನೆಯಾಯಿತು. ಆ ಸಮ್ಮೇಳನದ ಫಲಶ್ರುತಿಯೇ ಈ ಮಂಡಲ ಶಾಖೋಪಶಾಖೆಗಳಿಂದ ಬಾನುದ್ದ ಬೆಳೆದು ನಿಂತು ನಿರಂತರವೂ ಹೂ ಹಣ್ಣು ಕಾಯಿ ಬಿಡುವ ಹೆಮ್ಮೆಯ ಹೆಮ್ಮರ, ಮಧುರ ಮಾಮರ. ಸುಂದರ ಮಂದಾರ.

ಅದರ ಮುಖಾಂತರ ಸಮಾಜದ ಏಳ್ಗೆಗಾಗಿ ಸರ್ವತೋಮುಖ ನಡೆಯುತ್ತಲಿದೆ, ಮುಂದಿನ ಶತಸಾಧನೆಗಳಿಗೆಲ್ಲ ಇದೇ ತಾಯಿಬೇರು. ಇದು ಸಾಧಿಸಿದ ವಿಕ್ರಮಗಳು ನೂರಾರು.

ಎರಡು ವರ್ಷ ಪರ್ಯಾಯ ಕಾಲದಲ್ಲಿ ನಿರಂತರ ಪಾಠ ಪ್ರವಚನ, ಸತತ ಅನ್ನಸಂತರ್ಪಣ, ಧಾರಳವಾಗಿ ದಾನ ದಕ್ಷಿಣೆಯ ಧಾರಾಪ್ರವಾಹ. ಅನುದಿನವೂ ಹರಿಕಥೆ, ಹೋಮಹವನ, ಉಪನ್ಯಾಸ, ಸಂಗೀತ, ನರ್ತನ, ನಾಟಕ ಯಕ್ಷಗಾನ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಎಡೆಬಿಡದೆ ನಡೆದವು. ಅಂತೂ ಪರ್ಯಾಯ ನ ಭೂತೋ ನ ಭವಿಷ್ಯತಿ.

ಗುರು ಮಧ್ವರು ಸರ್ವಜ್ಞರು. ಅವರ ಗ್ರಂಥರಾಶಿ ಅಪಾರ. ಅವರ ತತ್ತ್ವಜ್ಞಾನ ಮೋಕ್ಷದಾಯಕ. ಆದರೆ ಅದನ್ನು ಹೇಳುವ ಪಂಡಿತರಿಲ್ಲ. ಕೇಳುವ ಆಸ್ತಿಕರಿಲ್ಲ. ''ವಕ್ತಾ ಶ್ರೋತಾ ಚ ದುರ್ಲಭಃ.''

ಶ್ರೀ ಸತ್ಯಧ್ಯಾನರ ಗರಡಿಯಲ್ಲಿ ತಯಾರಾದ ಪಂಡಿತರೆಲ್ಲ ಜ್ಞಾನವೃದ್ಧರಾದಂತೆ ವಯೋವೃದ್ಧರೂ ಆಗಿದ್ದಾರೆ. ಅವರೂ ಕೂಡ ವಿರಳಾತಿವಿರಳ. ಅದರಲ್ಲಿಯೇ ಹಲವರಿಗೆ ಅರಳುಮರಳು. ಕೆಲವರಿಗೆ ಮರಳಿ ಅರಳು ಪ್ರಾಯ ಪ್ರಾಯ ಕಳೆದ ಎಲ್ಲರಿಗೂ ವೃದ್ಧಿ ಸಂಧಿ.

'ಕೋ ವೇದಾನುದ್ಧರಿಷ್ಯತಿ' ಎಂದು ವೇದಗಳು ಕೂಗುತ್ತಿದ್ದವು. 'ಕೋನ್ವಸ್ಮಾನ್ ತಾರಯಿಷ್ಯತಿ' ಎಂದು ಶಾಸ್ತ್ರಗಳು ಒದರುತ್ತಿದ್ದವು. 'ದಾರಿಯಾವುದಯ್ಯ ವೈಕುಂಠಕ್ಕೆ ದಾರಿ ತೋರಿಸಯ್ಯ' ಎಂದು ಆಸ್ತಿಕರಾದ ಗೃಹಸ್ಥರು ಹಲಬುತ್ತಿದ್ದರು. ಆ ಕಾಲದ ತುಡಿತಕ್ಕೆ ಸಮಾಜದ ನಾಡೀಮಿಡಿತಕ್ಕೆ ಸ್ಪಂದಿಸಿದವರು ಶ್ರೀ ಪೇಜಾವರ ಶ್ರೀಗಳವರು.

ಅವರು ನೇರವಾಗಿ ರಾಜಧಾನಿಗೆ ಬಂದರು. ಬೆಂಗಳೂರಿನಲ್ಲಿಯ ಹನುಮಂತನಗರದ ಮೇಲಿನ ಕಾಡಿನಲ್ಲಿ ಗಹನತೆಯ ಗೂಡಿನಲ್ಲಿ ತಮ್ಮ ಹೃದಯದಷ್ಟೇ ವಿಶಾಲವಾದ ಬಿತ್ತರದ ಬಯಲು ಭೂಮಿಯನ್ನು ದುಡ್ಡು ಕೊಟ್ಟುಕೊಂಡರು. 'ಪೂರ್ಣಪ್ರಜ್ಞ ವಿದ್ಯಾಪೀಠ'ವನ್ನು ಸ್ಥಾಪಿಸಿದರು.

ಅದೊಂದು ವ್ಯಾಸಪೀಠ. ವೇದಶಾಸ್ತ್ರಗಳ ವಿಶ್ವವಿದ್ಯಾಲಯ.

ಹಿಂದೆ ಚಂದ್ರಿಕಾಚಾರ್ಯರು ಹಂಪಿಯಲ್ಲಿ ವೇದಾಂತ ವಿಶ್ವವಿದ್ಯಾಲಯವನ್ನೇ ತೆರೆದಿದ್ದರಂತೆ. ಮತ್ತೆ ಈಗ ಆ ಇತಿಹಾಸದ ಪುನರಾವೃತ್ತಿ.

ನೂರಾರು ವಿದ್ಯಾರ್ಥಿಗಳು. ಹತ್ತಿಪ್ಪತ್ತು ಪ್ರಕಾಂಡ ಪಂಡಿತರಾದ ಅಧ್ಯಾಪಕರು. ಎಲ್ಲರಿಗೂ ಅಲ್ಲಿಯೇ ಹೊಟ್ಟೆಬಟ್ಟೆ, ಊಟ ಪಾಠ, ಉಪಹಾರ, ಉಪಚಾರ.

ಅಲ್ಲಿ ಸಾವಿರಾರು ಛಾತ್ರರು ಓದಿದ್ದಾರೆ. ನೂರಾರು ಪಂಡಿತರು ತಯಾರಾಗಿದ್ದಾರೆ. ಅದೊಂದು ನವಭಾರತದ ನಾಲಂದಾ, ಕರ್ನಾಟಕದ ತಕ್ಷಶಿಲಾ.

ಇಂದು ಸ್ವಾಮಿಗಳವರ ಕನಸು ನನಸಾಗಿದೆ. ಅಲ್ಲಿ ಸಿದ್ಧರಾದ ಪ್ರಬುದ್ಧ ವಿದ್ವಾಂಸರು ನಾಡಿನ ನಾಕೂ

ನಿಟ್ಟಿನಲ್ಲಿ ಮಧ್ವಮತದ ಸಿದ್ಧಾಂತವನ್ನು ಶ್ರೀಸಾಮಾನ್ಯನ ಮನಮುಟ್ಟುವಂತೆ ಅಂತಃಕರಣ ತಟ್ಟುವಂತೆ ಬಿಂಬಿಸುವ ಕಾರ್ಯವನ್ನು ಪಾಠ ಪ್ರವಚನ, ಉಪನ್ಯಾಸ, ಗ್ರಂಥ ಲೇಖನ ಮುಖಾಂತರ ಮಾಡುತ್ತಿದ್ದಾರೆ. ಎಲ್ಲೆಡೆಯೂ ಮಾಧ್ವ ತತ್ವಜ್ಞಾನದ ವಿಜಯ ಡಿಂಡಿಮ ಕೇಳಿಬರುತ್ತದೆ. ವಿದ್ಯಾಪೀಠ ಸ್ಥಾಪನೆಯಾದ ನಂತರ ಬೆಂಗಳೂರಿನ ಆ ಭಾಗ ಹುಚ್ಚಾಪಟ್ಟೆ ಬೆಳೆದಿದೆ. ''ಗಂಧರ್ವರ ನಾಡಾಯಿತು ಕಾಡಿನ ಬೀಡು'' ಎನ್ನುವಂತಾಗಿದೆ.

ಇಂದಿನ ಸ್ಕೂಲು ಕಾಲೇಜುಗಳಲ್ಲಿ ಶಂಡಾಮರ್ಕಟರ ಸ್ಕೂಲುಗಳೇ ಹೆಚ್ಚು. ದೇವರಿಲ್ಲ, ಧರ್ಮವಿಲ್ಲ ಎಂದು ಅಲ್ಲಿಯ ಬೋಧನೆ. ಪಾಪ ಇಲ್ಲ, ಪುಣ್ಯ ಇಲ್ಲ ಎಂದೇ ಆ ಗುರುಗಳ ಪ್ರತಿಪಾದನೆ. ಅದರ ಪರಿಣಾಮವಾಗಿ ಯುವಜನಾಂಗ ಆಚಾರಹೀನ. ಸ್ವೈರ ಆಹಾರ ಸ್ವಚ್ಛಂದ ವಿಹಾರಗಳಿಂದ ಪಶುಭಿಃ ಸಮಾನ-ತಲೆಮಾರಿನಿಂದಲೇ ತಪ್ಪುತ್ತಿದೆ. ಸಂಧ್ಯಾವಂದನೆ ಪೂಜೆಯಂತೂ ಪೂಜಿ. ಎಷ್ಟೋ ಕಡೆ ಜನಿವಾರಕ್ಕೂ ಸಂಚಕಾರ. ಇದಕ್ಕೆ ಮದ್ದು ಮಾಡಿದವರು ಕಾಲಕ್ಕೆ ಮೊದಲೇ ಪ್ರಬುದ್ಧರಾದ ಪೇಜಾವರ ಶ್ರೀಗಳು.

ಆಚಾರ ಸಂಪನ್ನವಾದ ಆಸ್ತಿಕ ತರುಣ ಸಮಾಜವನ್ನು ರೂಪಿಸುವುದು ಅತ್ಯವಶ್ಯವಾಗಿತ್ತು. ಆಂಗ್ಲ ವಿದ್ಯೆಯನ್ನು ಓದಿದರೂ ಯುವಕರು ಅಪ್ಪಟ ಆರ್ಯ ಹಿಂದುಗಳಾಗಿ ಆದರ್ಶ ಬ್ರಾಹ್ಮಣರಾಗಿ ಬೆಳೆಯಬೇಕು ಎಂಬ ಸದುದ್ದೇಶದಿಂದ ದೇಶದೇಶ ತಿರುಗಾಡಿ ಎಲ್ಲೆಡೆ ವಿದ್ಯಾರ್ಥಿ ನಿಲಯಗಳನ್ನು ತೆರೆದರು, ಅಲ್ಲಿ ಸ್ನಾನ, ಸಂಧ್ಯೆ ಪ್ರಾರ್ಥನೆ, ಮಂತ್ರ ಪಾಠಗಳೆಡೆಗೆ ತರುಣರು ತಾವಾಗಿ ಆಕರ್ಷಿತರಾಗಿ ಬರುವ ವಾತಾವರಣವನ್ನು ನಿರ್ಮಿಸಲಾಯಿತು.

ಹುಬ್ಬಳ್ಳಿ-ಧಾರವಾಡ, ಮೈಸೂರು, ಉಡುಪಿ, ಬಾಗಲಕೋಟೆ, ಗುಲಬರ್ಗಾ, ಬೆಳಗಾವಿ, ವಿಜಾಪೂರ, ಮುಂಬೈ, ದಾವಣಗೆರೆ, ರಾಯಚೂರು, ಬೆಂಗಳೂರು, ಬಳ್ಳಾರಿ, ಗದಗ ಮುಂತಾದ ಕಡೆ ತ್ರಿಮತಸ್ಥ ಬ್ರಾಹ್ಮಣ ವಿದ್ಯಾರ್ಥಿಗಳಿಗೆ ಹನ್ನೆರಡು ಊರುಗಳಲ್ಲಿ ಊಟ, ವಸತಿ ಪಾಠ, ಸದಾಚಾರಗಳಿಗೆ ಸೌಕರ್ಯವನ್ನು ಕಲ್ಪಿಸಲಾಯಿತು. ಅದರಿಂದ ಆಚಾರನಿಷ್ಠವಾದ ನವಜನಾಂಗ ನಿರ್ಮಾಣ ಸಾಧ್ಯವಾಯಿತು.

ನಮ್ಮ ಸಮಾಜ ಬಡಸಮಾಜ, ಟೆನನ್ಸಿ ಕಾಯಿದೆಯಿಂದ ಹೊಲ ಹೋದವು. ಮೀಸಲಾತಿಯ ಪರಿಣಾಮವಾಗಿ ನೌಕರಿ ಇಲ್ಲ, ಮಕ್ಕಳಿಗೆ ಕಲಿಸಲಿಕ್ಕೆ ಹಣವಿಲ್ಲ. ಹೊಸ ಪೀಳಿಗೆಯ ಪ್ರತಿಭೆ, ಪ್ರಭೆ, ಪ್ರಭಾವ ಎಲ್ಲವೂ ದಟ್ಟ ದಾರಿದ್ರ್ಯದ ದಾವಾನಲದಲ್ಲಿ ಸುಟ್ಟು ಹೋಗುವ ಸಂದರ್ಭ. ಇದರಿಂದ ನೊಂದು ಕರುಳು ಕರಗಿದ ಶ್ರೀಗಳವರು ಪ್ರಾದೇಶಿಕ ಶಿಕ್ಷಣ ನಿಧಿಯನ್ನು ಪ್ರಾರಂಭ ಮಾಡಿದರು. ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ತೆಲಂಗಾಣ ವಿಭಾಗ ಮಾಡಿ ಪ್ರತಿವರ್ಷ ಲಕ್ಷಾವಧಿ ರೂಪಾಯಿಗಳ ಲೋನ ಸ್ಕಾಲರಶಿಪ್ ರೂಪವಾಗಿ ಹಂಚಿಸತೊಡಗಿದರು. ಇದರಿಂದ ಬಡತನದ ರೇಖೆಯ ಕೆಳಗಿದ್ದ ಎಷ್ಟೋ ಪ್ರತಿಭಾವಂತ ವಿದ್ಯಾರ್ಥಿಗಳು ಇಂಜಿನಿಯರರಾಗಿ, ಡಾಕ್ಟರರಾಗಿ, ಪ್ರೊಫೆಸರರಾಗಿ ಗೌರವದಿಂದ ಬಾಳುವಂತಾಯಿತು.

ಇದೆಲ್ಲದಕ್ಕೂ ಮಂಡಲದ ಕಾರ್ಯಾಲಯ ನಿರ್ವಾಹಕ್ಕೂ ದ್ರವ್ಯದ ಆವಶ್ಯಕತೆಯನ್ನು ಅನುಲಕ್ಷಿಸಿ ಹುಂಡಿ ನಿಧಿ ಯೋಜನೆಯನ್ನು ಮಾಡಲಾಯಿತು. ಅದರಿಂದ ಯಾರಿಗೂ ಭಾರವಾಗದಂತೆ ಶಿಕ್ಷಣ ಪ್ರಸಾರ ಕಾರ್ಯಕ್ಕೆ ಹಣ ಹರಿದು ಬರುವಂತಾಯಿತು.

ಸ್ವಾಮಿಗಳವರು ಪ್ರತಿವರ್ಷ ಅಥವಾ ಎರಡು ವರ್ಷಕ್ಕೊಮ್ಮೆ ಮಾಡುವ ಮಾಧ್ವಮಹಾಮಂಡಲದ ಅಧಿವೇಶನ ಹಾಗೂ ತತ್ವಜ್ಞಾನ ಸಮ್ಮೇಳನಗಳು ಸಮಾಜದಲ್ಲಿ ಪ್ರಚಂಡ ಕ್ರಾಂತಿಯನ್ನೇ ಮಾಡಿದವು.

ಈ ದೃಷ್ಟಿಯಿಂದ ಉಡುಪಿಯಲ್ಲಿ ೧೯೫೫ರಲ್ಲಿ ನೆರವೇರಿದ ಮೊಟ್ಟ ಮೊದಲನೆಯ ಮಾಧ್ವ ತತ್ತ್ವಜ್ಞಾನ ಸಮ್ಮೇಳನ ಘಟ್ಟದ ಮೇಲಿನ ಹಾಗೂ ಘಟ್ಟದ ಕೆಳಗಿನ ವೈದಿಕ ಜನರ ಹಾರ್ದಿಕ

ಸ್ನೇಹಸಾಮರಸ್ಯದ ಹುರಿಯನ್ನು ಗಟ್ಟಿ ಗಟ್ಟಿಯಾಗಿ ಮಾಡಿತು. ಈ ಸಮ್ಮೇಳನವು ಲೌಕಿಕರ, ವೈದಿಕರ, ಗುರುಶಿಷ್ಯರ, ಪಂಡಿತ ಪಾಮರರ, ರಾಜಪ್ರಜರ, ವೇದಾಂತಿ ವ್ಯವಹಾರಿಕರ, ಆಸ್ತಿಕ ನಾಸ್ತಿಕರ, ಶ್ರೀಗಳ ಹಾಗೂ ಶ್ರೀಸಾಮಾನ್ಯರ ಒಂದು ಮಧುರ ಮೇಲನವೇ ಆಗಿದ್ದಿತು.

ಮೈಸೂರ ಮಹಾರಾಜರು ಉದ್ಘಾಟಿಸಿದ ಈ ಸಮ್ಮೇಳನದಲ್ಲಿ ಬಂದ ಜನರಿಗೆಲ್ಲ ಒಂದು ವಿಷಯ ಮನದಟ್ಟಾಯಿತು. ಮಾಧ್ವ ತತ್ತ್ವಜ್ಞಾನ ಬರೀ ಪುಸ್ತಕ ಪ್ರಮೇಯವಲ್ಲ. ಅದೊಂದು ಬದುಕಿನ ಬಗೆ. ಜೀವನ ಪ್ರಣಾಲಿಕೆ. ಜೀವಂತ ಸಿದ್ಧಾಂತ. ಅದೊಂದು ಬರೀ ಅರಿವು ಅಲ್ಲ ಇರವು. ವೇದಶಾಸ್ತ್ರೋಕ್ತ ಶುದ್ಧ ಜೀವನವೆಂದರೆ ಮಧ್ವಸಿದ್ಧಾಂತ ಎಂಬ ತಿಳಿವು ಎಲ್ಲರಲ್ಲಿಯೂ ಉದಿಸಿನಿಂದಿತು. ಎಲ್ಲರ ಮನದಲ್ಲಿ ಹರಳುಗಟ್ಟಿತು. ಭಿನ್ನ ಭಿನ್ನ ದೇಶದ ಭಿನ್ನ ಭಿನ್ನ ಭಾಷೆಯ ಭಿನ್ನ ಭಿನ್ನ ಮಠಗಳ ಅಬ್ಬರಿಸುವ ಹೆಬ್ಬುಲಿಗಳನ್ನೆಲ್ಲ ರಿಂಗ್‌ಮಾಸ್ಟರನಂತೆ ರಾಜಾಂಗಣದಲ್ಲಿ ಕೂಡಿಸಿ ಆಡಿಸಿ ಒಂದೂಗೂಡಿಸಿ ಮಧ್ವಮಹೋತ್ಸವ ಮಾಡಿದ ಮೀಶೆ ಮೂಡದ ಸ್ವಾಮಿಗಳ ಕರ್ತೃತ್ವ ಶಕ್ತಿ ಸಂಘಟನಾ ಸಾಮರ್ಥ್ಯವನ್ನು ಕಂಡು ಜನ ನಿಬ್ಬೆರಗಾಗಿ ನಿಂತಿತು.

೧೯೫೬ನೇ ಇಸ್ವಿಯಲ್ಲಿ ಕೊಯಮತ್ತೂರಿನಲ್ಲಿ ತತ್ತ್ವಜ್ಞಾನದ ದ್ವಿತೀಯ ಸಮ್ಮೇಳನ ಅದ್ವಿತೀಯವಾಗಿಯೇ ನಡೆಯಿತು. ನ್ಯಾಯಮೂರ್ತಿ ಎನ್. ಎಸ್. ಲೋಕೂರರವರು ಅಧ್ಯಕ್ಷರಾಗಿದ್ದರು.

## ಸಮ್ಮೇಳನ-ಉತ್ಸವ

ಕೊಯಮತ್ತೂರಿಗಿಂತ ಮೊದಲು ಮೂರು ಅತ್ಯಂತ ಸ್ಮರಣೀಯವಾದ ಸಮ್ಮೇಳನಗಳು ನಡೆದವು. ಬಳ್ಳಾರಿಯಲ್ಲಿ (೧೯೫೪) ನಡೆದ ಮಾಧ್ವ ತತ್ತ್ವಜ್ಞಾನ ಸಮ್ಮೇಳನ ಅಭೂತಪೂರ್ವವಾದ ಧಾರ್ಮಿಕ ಕ್ರಾಂತಿಯನ್ನೇ ಮಾಡಿತು. ದಿ. ಮಾಹುಲಿ ಗೋಪಾಲಾಚಾರ್ಯರು, ಮೊಹರೆ ಹನುಮಂತರಾಯರು, ವಿ. ಬಿ. ನಾಯಕರು, ಹ. ರಾ. ಪುರೋಹಿತರು, ರಾಜಾ ಎಸ್, ಗುರುರಾಜಾಚಾರ್ಯರು, ಬುರ್ಲಿ ಬಿಂದಾಚಾರ್ಯರು, ಗುರಾಚಾರ್ಯ ಪಾಂಡುರಂಗಿ ಮೊದಲಾದ ಮಾಧ್ವಮತದ ಲೌಕಿಕರು, ವೈದಿಕರು ಒಂದೆಡೆ ಸೇರಿ ಸಮಾಜದ ಉನ್ನತಿಗಾಗಿ ಚರ್ಚಿಸಿ ಮಂಡಳವು ಕಾರ್ಯೋನ್ಮುಖವಾಗುವಂತೆ ಮಾಡಿದರು. ಅದೇ ವರ್ಷ ಕರ್ನಾಟಕದ ಮಧ್ಯವರ್ತಿ ಸ್ಥಳವಾದ ದಾವಣಗೆರೆಯಲ್ಲಿ ಮಾಧ್ವ ತತ್ತ್ವಜ್ಞಾನ ಸಮ್ಮೇಳನವನ್ನು ಶ್ರೀ ಶ್ರೀಗಳವರು ಯಶಸ್ವಿಯಾಗಿ ನಡೆಸಿ ಮಧ್ವಮತದ ಉನ್ನತಿಗೆ ಶ್ರಮಿಸಲು ಕಟಿಬದ್ಧರಾಗಲು ತರುಣ ಪೀಳಿಗೆಗೆ ಕರೆಕೊಟ್ಟರು.

ಬಾಗಲಕೋಟೆಯು (೧೯೫೫) ಕೆರೂರ ಸ್ವಾಮಿರಾಚಾರ್ಯ, ಕೆರೂರ ವಾಸುದೇವಾಚಾರ್ಯ, ಮಳಗಿ ವೇದವ್ಯಾಸಾಚಾರ್ಯರಂಥ ಶಾಸ್ತ್ರ, ಪಂಡಿತ ಪ್ರಕಾಂಡರ ತವರೂರು. ಮಾಧ್ವರ ಗಂಡುಮೆಟ್ಟು. ೧೯೨೪ರಲ್ಲಿ ಶ್ರೀ ಸತ್ಯಧ್ಯಾನತೀರ್ಥರು ಅತ್ಯದ್ಭುತವಾಗಿ ಇಲ್ಲಿ ಮಹಾಸಮಾರಾಧನೆ ನೆರವೇರಿಸಿ ಮಾಧ್ವರ ಜನ ಜಾಗರಣ ಕಾರ್ಯ ಮಾಡಿದ್ದರು. ಅಲ್ಲಿ ಪೇಜಾವರ ಶ್ರೀಗಳು ನಡೆಸಿದ ತತ್ತ್ವಜ್ಞಾನ ಸಮ್ಮೇಳನ ಮಾಧ್ವತತ್ತ್ವಜ್ಞಾನ ಉತ್ಸವ ಅಭೂತಪೂರ್ವ ಎನಿಸಿತು.

## ಸಮ್ಮೇಳನದಲ್ಲಿ ರಾಷ್ಟ್ರಪತಿ

ಅನಂತರ ಮಾಧ್ವರ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನೇ ಹೈದರಾಬಾದದಲ್ಲಿ (೧೯೫೮) ನಡೆದ ತತ್ತ್ವಜ್ಞಾನ ಸಮ್ಮೇಳನ ಬರೆಯಿತು. ಭಾರತದ ಪ್ರಪ್ರಥಮ ರಾಷ್ಟ್ರಪತಿ ಬಾಬು ರಾಜೇಂದ್ರಪ್ರಸಾದರು ಅದರ ಉದ್ಘಾಟನೆಗಾಗಿ ಬಂದಿದ್ದರು. ಆ ಭಾಗ್ಯನಗರದಲ್ಲಿ ನಡೆದ ಈ ತತ್ತ್ವಜ್ಞಾನ ಉತ್ಸವಕ್ಕೆ ಪ್ರಾಯಃ ಮಾಧ್ವಪೀಠಾಧಿಪತಿಗಳೆಲ್ಲರೂ ಬಂದಿದ್ದರು. ಭಾರತದ ಅಧ್ಯಾತ್ಮಿಕ ಧೋರಣೆಯ ಪ್ರತಿನಿಧಿಯಂತಿದ್ದ ರಾಜೇಂದ್ರಪ್ರಸಾದರ ಮನಸ್ಸಿನ ಮೇಲೆ ಮಾಧ್ವ ತತ್ವಜ್ಞಾನ ವಿಲಕ್ಷಣವಾದ ಪರಿಣಾಮ ಬೀರಿತು. ರಾಷ್ಟ್ರಪತಿಗಳು ಶ್ರೀಗಳವರನ್ನು ರಾಜಭವನಕ್ಕೆ ಬರಮಾಡಿಕೊಂಡು ಸಕುಟುಂಬವಾಗಿ ಗೌರವವನ್ನು

ಅರ್ಪಿಸಿದರು. ರಾಜೇಂದ್ರಪ್ರಸಾದರ ಧರ್ಮಪತ್ನಿ ವೈಷ್ಣವ ಗುರುಪೀಠದ ಮೇಲಿನ ಭಕ್ತಿಯಿಂದ ತಮಗೆ ತಪ್ತಮುದ್ರಾಧಾರಣ ಮಾಡಿಸಬೇಕೆಂದು ಶ್ರೀ ಪೇಜಾವರ ಶ್ರೀಗಳವರಲ್ಲಿ ಬಿನ್ನವಿಸಿ ಕೊಂಡರು. ಮುದ್ರಾಧಾರಣೆಯಿಂದ ತಮ್ಮ ಜನ್ಮ ಸಾರ್ಥಕವಾಯಿತೆಂದು ಧನ್ಯತಾಭಾವದಿಂದ ನುಡಿದರು. ೧೯೭೫ ಹಾಗೂ ೧೯೭೯ರಲ್ಲಿ ಮತ್ತು ಎರಡು ಸಲ ಇಲ್ಲಿಯೇ ಮಾಧ್ವ ತತ್ತ್ವಜ್ಞಾನ ಮಹೋತ್ಸವವು ಅಷ್ಟೇ ವೈಭವ ವಿಜೃಂಭಣೆಯಿಂದ ನೆರವೇರಿ ಮಾಧ್ವಪ್ರಜ್ಞೆ ಜನಮನದಲ್ಲಿ ಮಾಸದಂತೆ ನಿರಂತರವೂ ಪರಿಮಳ ಸೂಸುವಂತೆ ಆಯಿತು. ೧೯೫೯ ಗಂಗಾವತಿಯಲ್ಲಿ ಮಾಧ್ವ ತತ್ತ್ವಜ್ಞಾನ ಗಂಗಾ ಪ್ರವಾಹವೇ ಹರಿಯಿತು. ಆನಂದತೀರ್ಥರ ಜ್ಞಾನ ಮಂದಾಕಿನಿಯಲ್ಲಿ ಮಿಂದು, ತುಂಗಾತೀರದ ಪರಿಸರ ಪ್ರದೇಶದ ಜನವೆಲ್ಲ ಪುನೀತರಾದರು.

## ಧರ್ಮಪ್ರಕಾಶದಲ್ಲಿ ಮಾಧ್ವಪ್ರಕಾಶ

೧೯೬೦ರಲ್ಲಿ ಮದ್ರಾಸದ ಧರ್ಮಪ್ರಕಾಶದಲ್ಲಿ ಕರ್ನಾಟಕದ ರಾಜ್ಯಪಾಲರು ಉದ್ಘಾಟಿಸಿದ ತತ್ತ್ವಜ್ಞಾನ ಸಮ್ಮೇಳನವು ನ ಭೂತೋ ನ ಭವಿಷ್ಯತಿ ಎನ್ನುವ ರೀತಿಯಲ್ಲಿ ವೈಭವದಿಂದ ನಡೆಯಿತು. ಮದ್ರಾಸಿನ ಶ್ರೀ ಕೆ. ಸೀತಾರಾಮರಾಯರು, ಶ್ರೀಗಳವರ 'ಪ್ರೇರಣೆಯ ಪ್ರೀತ್ಯರ್ಥ' ಲಕ್ಷಾವಧಿ ರೂಪಾಯಿ ವೆಚ್ಚಮಾಡಿ ಆ ಮಹಾಸಮ್ಮೇಳವನ್ನು ರಾಜಸೂಯಯಾಗದಂತೆ ಅದ್ದೂರಿಯಿಂದ ನೆರವೇರಿಸಿದರು. ಶ್ರೀ ಸೀತಾರಾಮರಾಯರು, ಶ್ರೀಗಳವರ ಆಜ್ಞೆಯಾದಾಗಲೆಲ್ಲ ಮುಕ್ತ ಹಸ್ತದಿಂದ ದಾನ ನೀಡುತ್ತಿದ್ದರು. ಶ್ರೀ ಭಂಡಾರಕೇರಿ ಹಾಗೂ ಶ್ರೀ ಪೇಜಾವರ ಮಠಧೀಶರ ಸಲಹೆಯಂತೆ ಉಡುಪಿಯಲ್ಲಿ ಶತಾಯುಷಿ ಶ್ರೀ ಪುತ್ತಿಗೆ ಮಠದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರ ಶತಮಾನೋತ್ಸವವನ್ನು ನೆರವೇರಿಸಿ ಒಂದು ಸಾವಿರ ಜನ ವಿದ್ವಾಂಸರಿಗೆ ಬೆಳ್ಳಿ ತಂಬಿಗೆ ಒಂದು ಬಂಗಾರದ ಸವರನ್, ನೂರಾರು ರೂ. ದಕ್ಷಿಣೆ ದಾನಗಳನ್ನಿತ್ತರು. ಈ ತತ್ತ್ವಜ್ಞಾನ ಸಮ್ಮೇಳನದಲ್ಲಿ ಕೂಡ ಸಾವಿರಾರು ಜನ ಪಂಡಿತರಿಗೆ ರಜತ ಕಲಶ, ಸಾವಿರಾರು ಜನ ಮುತ್ತೈದೆಯರಿಗೆ ರೇಶಿಮೆ ಬಟ್ಟೆಗಳನ್ನು ಹಾಗೂ ಎಲ್ಲರಿಗೂ ವಿಪುಲವಾಗಿ ದಾನ ದಕ್ಷಿಣೆಗಳನ್ನು ಶ್ರೀಗಳ ಹಸ್ತದಿಂದ ಕೊಡಿಸಿ ಕೃತಾರ್ಥರಾದರು. ಮದ್ರಾಸಿನ ಮಾಧ್ವ ತತ್ತ್ವಜ್ಞಾನ ಸಮ್ಮೇಳನ ಮುಗಿದು ಇಂದಿಗೆ ೩೦ ವರ್ಷಗಳ ಮೇಲಾದರೂ ಪ್ರತಿಯೊಬ್ಬ ಮಾಧ್ವ ಪಂಡಿತರ ಮನದಲ್ಲಿ ಅದಿನ್ನೂ ಹಚ್ಚಹಸಿರಾಗಿಯೇ ಉಳಿದಿದೆ.

## ರಾಜಧಾನಿಯಲ್ಲಿ ಎರಡು ಸಮ್ಮೇಳನ

ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ೧೯೬೩ ಹಾಗೂ ೧೯೭೮ ಈ ಎರಡು ವರ್ಷಗಳಲ್ಲಿ ನಡೆದ ತತ್ತ್ವಜ್ಞಾನ ಸಮ್ಮೇಳನ ಅನೇಕ ದೃಷ್ಟಿಯಿಂದ ಚಿರಸ್ಮರಣೀಯವಾಗಿ ಮಾಧ್ವರ ಇತಿಹಾಸದಲ್ಲಿ ಬಂಗಾರದ ಅಕ್ಷರಗಳಿಂದ ಬರೆದಿಡುವಂತಾಯಿತು. ಬೆಂಗಳೂರು ಮಾಧ್ವರ ಕೇಂದ್ರಸ್ಥಾನ. ಇಡೀ ನಾಡಿನಲ್ಲಿ ಇರುವ ಮಾಧ್ವರ ಸರಿಸಮಾನ ಸಂಖ್ಯೆಯಷ್ಟು ಮಾಧ್ವರು ಇದೊಂದೆ ಮಹಾನಗರದಲ್ಲಿ ನೆಲೆಸಿದ್ದಾರೆ. ಆದ್ದರಿಂದ ಅಲ್ಲಿ ನಡೆದ ಸಮ್ಮೇಳನಕ್ಕೆ ನೆರೆದಷ್ಟು ಜನ ಯಾವ ತತ್ತ್ವಜ್ಞಾನ ಉತ್ಸವದಲ್ಲಿಯೂ ಸೇರಿರಲಿಕ್ಕಿಲ್ಲ. ನಾಡಿನ ನಾಲ್ಕೂ ನಿಟ್ಟಿನಿಂದ ನಾಮಾಂಕಿತ ಪಂಡಿತ ಪುಂಡರೀಕರು, ಗಣ್ಯ ಗೃಹಸ್ಥರು ಅಲ್ಲಿ ಸೇರಿದ್ದರಿಂದ ವಿದ್ವತ್‌ಗೋಷ್ಠಿ, ವಾಕ್ಯಾರ್ಥ ವಿಚಾರ, ಉಪನ್ಯಾಸ, ಠರಾವುಗಳು ಎಲ್ಲವೂ ಅತ್ಯದ್ಭುತ ರೀತಿಯಲ್ಲಿ ನೆರವೇರಿದವು. ಅಲ್ಲಿ ನಡೆದ ಪ್ರತಿಯೊಂದು ಕಾರ್ಯಕ್ರಮವು ಶ್ರೀಗಳವರ ಸಂಘಟನಾ ನೈಪುಣ್ಯಕ್ಕೆ ನಿದರ್ಶನವಾಗಿದೆ. ಬೆಂಗಳೂರಿನ ಎರಡೂ ಸಮ್ಮೇಳನಗಳಲ್ಲಿ ಮಾಧ್ವ ಜನತೆ ನಾವು ಯಾರು, ಎಲ್ಲಿ ಇದ್ದೇವೆ ಏನು ಮಾಡಬೇಕೆಂಬುದನ್ನು ಅರಿತು ಗುರುತಿಸಿಕೊಂಡರು.

## ವಿಜಯವಾಡದಲ್ಲಿ ವಿಜಯಪತಾಕೆ

ಮಾಧ್ವರು, ಕರ್ನಾಟಕದಲ್ಲಿ ಮಾತ್ರ ಇರುವರು; ಮಧ್ವಮತ ಕನ್ನಡ ನಾಡಿಗೆ ಮಾತ್ರ ಸೀಮಿತ ಎಂಬ ತಪ್ಪು ಕಲ್ಪನೆಯನ್ನು ಅಳಿಸಿ, ಅಖಿಲ ಭಾರತದಲ್ಲಿ ಅ. ಭಾ. ಮಟ್ಟದಲ್ಲಿ ಮಧ್ವಮತವು ಜಯಭೇರಿ ಬಾರಿಸುತ್ತದೆ, ವಿಜಯದುಂದುಭಿ ಮೊಳಗಿಸುತ್ತದೆ ಎಂಬುದರ ನಿದರ್ಶನವಾಗಿ ವಿಜಯವಾಡದಲ್ಲಿ ೧೯೬೭ರಲ್ಲಿ ಅತ್ಯಂತ ಯಶಸ್ವಿ ಸಮ್ಮೇಳನ ನೆರವೇರಿತು. ಮಂತ್ರಾಲಯವನ್ನು ಬಿಟ್ಟು ಹೊರಗೆ ಬಾರದಿರುವ ಶ್ರೀ ಸುಯಮೀಂದ್ರತೀರ್ಥರು ಮತ್ತು ಶ್ರೀ ವ್ಯಾಸರಾಜಮಠದ ವಿದ್ಯಾಪ್ರಸನ್ನತೀರ್ಥರು ಅದರ ಅಧ್ಯಕ್ಷತೆ ವಹಿಸಿ ಸಮ್ಮೇಳನಕ್ಕೆ ಕಳೆಕಟ್ಟುವಂತೆ ಮಾಡಿದರು.

ಇದರಂತೆ ೧೯೬೯ ಹಾಗೂ ೧೯೮೬ರಲ್ಲಿ ಉಡುಪಿಯಲ್ಲಿ, ೧೯೭೪ರಲ್ಲಿ ಮೈಸೂರಿನಲ್ಲಿ, ೧೯೮೦ರಲ್ಲಿ ಎರ್ನಾಕುಲಮ್‌ನಲ್ಲಿ, ೧೯೮೧ರಲ್ಲಿ ಹುಬ್ಬಳ್ಳಿಯಲ್ಲಿ, ೧೯೯೦ರಲ್ಲಿ ಅನಂತಪುರದಲ್ಲಿ ಮಾಧ್ವ ತತ್ತ್ವಜ್ಞಾನ ಸಮ್ಮೇಳನಗಳು ಶ್ರೀಗಳವರ ಪ್ರೇರಕ-ಕಾರಕ ಶಕ್ತಿಯಿಂದ ಅವರಿಗೆ ನೀಡಿದ ಸಾರ್ವಜನಿಕರ ಸಹಕಾರ ದಿಂದ ಅತ್ಯಂತ ವೈಭವಯುತವಾಗಿ ನೆರವೇರಿದವು. ಒಂದೊಂದು ಸಮ್ಮೇಳನವೂ ಪ್ರಚಂಡ ಧಾರ್ಮಿಕ ಕ್ರಾಂತಿಯನ್ನು ಮಾಡಿ ಒಂದೊಂದು ಗ್ರಂಥ ರಚಿಸುವಷ್ಟು ಸಾಧನೆಗಳನ್ನು ಸಾಧಿಸಿ ಶ್ರೀಗಳವರ ಕರ್ತೃತ್ವ ಶಕ್ತಿಗೆ ಕಿರೀಟವಿಟ್ಟವು.

ಒಟ್ಟು ಶ್ರೀ ಶ್ರೀಗಳವರು ಪ್ರೇರಣಾಕಾರಣಪುರುಷರು. ನಾಡಿನ ನಿಟ್ಟುನಿಟ್ಟಿಗೆ ನೆರವೇರಿಸಿದ ತತ್ತ್ವಜ್ಞಾನದ ಉತ್ಸವಗಳು ಇಪ್ಪತ್ತು. ಇದರಿಂದ ಭಾರತದ ಮೂಲೆ ಮೂಲೆಯಲ್ಲಿಯೂ ಮಧ್ವಮತದ ಕಹಳೆ ಮೊಳಗುವಂತಾಯಿತು.

## ವಿಶ್ವಹಿಂದು ಪರಿಷತ್ತು-ಸಮ್ಮೇಳನ

ವಿಶ್ವಹಿಂದು ಪರಿಷತ್ತು ತಲೆ ಎತ್ತಿದುದು ನಮ್ಮ ದೇಶದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ. ೧೯೬೬ರಲ್ಲಿ ಪ್ರಯಾಗದಲ್ಲಿ ನಡೆದ ವಿಶ್ವಹಿಂದು ಸಮ್ಮೇಳನ ಅಪೂರ್ವವಾದುದು. ಅದರಲ್ಲಿ ಶ್ರೀ ಪೇಜಾವರ ಶ್ರೀಗಳು ಸಕ್ರಿಯವಾಗಿ ಪಾಲುಗೊಂಡು ಸಮ್ಮೇಳನದ ಹಾಗೂ ಅದರ ಮುಂದಿನ ಕಾರ್ಯವಿಧಾನದ ಬಗ್ಗೆ ಮಾರ್ಗದರ್ಶನ ನೀಡಿದರು.

೧೯೬೯ರಲ್ಲಿ ಉಡುಪಿಯಲ್ಲಿ ಜರುಗಿದ ವಿಶ್ವಹಿಂದು ಪರಿಷತ್ತಿನ ಕರ್ನಾಟಕ ಪ್ರಾಂತೀಯ ಸಮ್ಮೇಳನ ಶ್ರೀ ಶ್ರೀಗಳ ಸಂಘಟನಾ ಶಕ್ತಿಯ ಸಕೃದ್ ದರ್ಶನ ಮಾಡಿಸಿತು. ಶ್ರೀಗಳವರು ಎರಡನೆಯ ಬಾರಿ ಪರ್ಯಾಯ ಪೀಠವನ್ನು ಅಲಂಕರಿಸಿ ಅದರ ಕೊನೆಯ ಹಂತದಲ್ಲಿದ್ದಾಗ ೧೯೬೯ರ ಡಿಸೆಂಬರ್‌ನಲ್ಲಿ ಉಡುಪಿಯಲ್ಲಿ ನಡೆಸಿದ ಬೃಹತ್ ಸಮ್ಮೇಳನಕ್ಕೆ ೧೫೦೦೦ಕ್ಕಿಂತ ಹೆಚ್ಚು ಜನ ಹೊರಗಿನಿಂದ ಆಗಮಿಸಿದ್ದರು. ಚಿಕ್ಕ ಉಡುಪಿ ಜನಸಾಗರದಿಂದ ತುಂಬಿ ತುಳುಕುತ್ತಿದ್ದಿತು. ಶ್ರೀಗಳವರ ಸಂಘಟನಾ ಶಕ್ತಿಯನ್ನು ಕಂಡು ಕೌತುಕಪಟ್ಟ ಸರಸಂಘಚಾಲಕ ಶ್ರೀ ಮಾಧವ ರಾವ್ ಗೋಳವಲಕರ ಅವರು ಮುಕ್ತಕಂಠದಿಂದ ಹೊಗಳಿದರು.

ಈ ಸಮ್ಮೇಳನಕ್ಕೆ ಅಸಾಮಿನಿಂದ ಆಗಮಿಸಿದ್ದ ಚೈತನ್ಯಪಂಥದ ಗುರುಗಳನ್ನು ಶ್ರೀಕೃಷ್ಣ ಮಠದಲ್ಲಿ ಸತ್ಕರಿಸಿದ್ದು ಒಂದು ವಿಶೇಷ.

ಇದರ ಬೆನ್ನ ಹಿಂದೆಯೇ ಅಸಾಮ ಪ್ರಾಂತೀಯ ವಿಶ್ವಹಿಂದು ಸಮ್ಮೇಳನ ಜೋಹ್ರಾಟನಲ್ಲಿ ೧೯೭೦ರಲ್ಲಿ ನಡೆಯುವಂತಾಯಿತು. ಆ ಸಮ್ಮೇಳನದಲ್ಲಿ ಭಾಗವಹಿಸಿದ ಶ್ರೀಗಳು ಜಯಂತಿಯಾ ಹಾಗೂ ಹಿಸ್ಸಾರ ಜಿಲ್ಲೆಗಳ ಗುಡ್ಡಗಾಡಿನಲ್ಲಿ ನೆಲೆಸಿರುವ ಬುಡಕಟ್ಟು ಜನಾಂಗದವರನ್ನು ಸಂಪರ್ಕಿಸಿ ಅವರೊಡನೆ

ಮಾತುಕತೆ ನಡೆಸಿದರು. ಆಗಿನ ಅಸಾಮ ಮುಖ್ಯಮಂತ್ರಿ ಶ್ರೀ ಬಿ. ಪಿ. ಚಾಲಿಹಾ ಅವರೂ ಬಂದು ಶ್ರೀಗಳರನ್ನು ಕಂಡು ಚರ್ಚಿಸಿದರು. ಭಾವೈಕ್ಯ ಸಾಧನೆಯ ಕ್ಷೇತ್ರದಲ್ಲಿ ಇದೊಂದು ಮೈಲಿಗಲ್ಲು.

ಮಹಾರಾಷ್ಟ್ರ ಪ್ರಾಂತೀಯ ವಿಶ್ವಹಿಂದು ಸಮ್ಮೇಳನ ೧೯೭೪ರಲ್ಲಿ ಪಂಢರಪುರದಲ್ಲಿ ಸೇರಿದಾಗ ಅದರ ಅಧ್ಯಕ್ಷತೆ ಶ್ರೀಗಳವರೇ ವಹಿಸಿದ್ದರು.

ಅನಂತರ ತಿರುಪತಿಯಲ್ಲಿ ಆಂಧ್ರಪ್ರದೇಶದ ಪ್ರಾಂತೀಯ ವಿಶ್ವಹಿಂದು ಸಮ್ಮೇಳನ ಸೇರಿದಾಗ ಅದಕ್ಕೆ ಪೂರ್ವಭಾವಿಯಾಗಿ ಆ ರಾಜ್ಯದಾದ್ಯಂತ ಬಿರುಸಿನ ಸಂಚಾರ ಕೈಗೊಂಡು ಸಮ್ಮೇಳನದ ಯಶಸ್ಸಿಗೆ ಕಾರಣಕರ್ತರಾದರು.

## ಮಣಿಪುರದಲ್ಲಿ ಮಹೋತ್ಸವ

ಮಣಿಪುರದಲ್ಲಿ ನಡೆದ ವಿಶ್ವಹಿಂದ ಸಮ್ಮೇಳನ ಶ್ರೀಗಳವರಿಗೆ ಅಲ್ಲಿನ ಜೀವನ ಪರಿಚಯಿಸಿತು. ತರಕಾರಿ ಮಾರುವವರನ್ನು ಮೊದಲು ಮಾಡಿ ಎಲ್ಲರೂ ಗೋಪೀಚಂದನ ಧರಿಸಿದ ವೈಷ್ಣವರು. ಆ ಜನರೊಂದಿಗೆ ಸಂಪರ್ಕ ಸಮಾಲೋಚನೆ ನಡೆಸಿದರು. ವೈಷ್ಣವ ಪೀಠಾಧಿಪತಿಗಳೊಬ್ಬರು ತಮ್ಮ ಬೆನ್ನಹಿಂದೆ ಇರುವರೆಂಬ ಮಾತೇ ಆ ಜನರಿಗೆಲ್ಲ ಹೆಮ್ಮೆ ಹಮ್ಮಿಸಿತು, ಹರ್ಷವನ್ನು ಉಕ್ಕಿಸಿತು.

ಪ್ರಯಾಗದಲ್ಲಿ ೧೯೭೮ರಲ್ಲಿ ಎರಡನೆಯ ವಿಶ್ವಹಿಂದು ಸಮ್ಮೇಳನ. ಕಳೆದ ೧೨ ವರ್ಷಗಳ ಅವಧಿಯಲ್ಲಿ ಅನೇಕ ರಾಜ್ಯಗಳಲ್ಲಿ ಪ್ರಾಂತೀಯ ಸಮ್ಮೇಳನಗಳು ಶ್ರೀಗಳವರ ಪ್ರೇರಣೆ - ಮಾರ್ಗದರ್ಶನದಿಂದ ನಡೆದು ಜನಜಾಗೃತಿಯುಂಟುಮಾಡಿದ್ದವು. ವಿದೇಶಗಳಲ್ಲಿ ನೆಲೆಸಿರುವ ಹಿಂದುಗಳೊಂದಿಗೆ ನಿಕಟ ಸಂಪರ್ಕವಿರಿಸಿಕೊಳ್ಳುವಂತೆ ಮಾಡುವ ಯತ್ನಗಳಿಗೆ ಶ್ರೀಗಳವರ ಮಾರ್ಗದರ್ಶನ ನಿರಂತರವಾಗಿ ಒದಗುತ್ತಿದ್ದಿತು.

ಉಡುಪಿಯಲ್ಲಿ ೧೯೬೮ರಲ್ಲಿ ಜರುಗಿದ ಸಮ್ಮೇಳನದಲ್ಲಿ "ಹಿಂದವಾಃ ಬಾಂಧವಾಃ ಸರ್ವೇ, ನ ಹಿಂದುಃ ಪತಿತೋ ಭವೇತ್" ಎಂಬ ಘೋಷಣೆ ನೀಡುವುದಕ್ಕೆ ಶ್ರೀಗಳವರೇ ಕಾರಣರು. ಅದು ಇಡಿ ಸಂಘಟನೆಗೆ ಶಕ್ತಿ ಮಂತ್ರವೆನಿಸಿತು. ಉಜಿರೆಯಲ್ಲಿ ೧೯೮೩ರಲ್ಲಿ ಎರಡನೆಯ ಪ್ರಾಂತೀಯ ಹಿಂದು ಸಮ್ಮೇಳನ ನಡೆದು ಶ್ರೀಗಳವರ ಪ್ರೇರಣೆಯಿಂದ ಆ ಘೋಷಣೆಯನ್ನು ಹೆಚ್ಚು ದೃಢಪಡಿಸಿತು.

೧೯೮೫ರಲ್ಲಿ ಉಡುಪಿಯಲ್ಲಿ ನಡೆದ ಸಂತಸಮ್ಮೇಳನ ಹಾಗೂ ೧೯೮೯ ಮತ್ತು ೧೯೯೧ರಲ್ಲಿ ಅನುಕ್ರಮವಾಗಿ ಪ್ರಯಾಗ ಮತ್ತು ಹರಿದ್ವಾರದಲ್ಲಿ ನಡೆದ ಸಂತ ಸಮ್ಮೇಳನಗಳಲ್ಲಿ ಒಂದೊಂದು ಗೋಷ್ಠಿಯ ಅಧ್ಯಕ್ಷ ಸ್ಥಾನ ವಹಿಸಿ ಸಂತ ಸಂಘಟನೆಗೆ ವಿಶೇಷ ಚಾಲನೆ ನೀಡಿದರು.

ಪಶುಪತಿನಾಥನ ನೆಲೆ ನೇಪಾಳ. ಭೂತಳದಲ್ಲಿ ಭಾರತದ ಹೊರಗಿನ ಏಕಮೇವ ಹಿಂದು ರಾಷ್ಟ್ರ. ೧೯೮೮ರಲ್ಲಿ ರಾಷ್ಟ್ರದ ರಾಜಧಾನಿ ಕಠಮಂಡುವಿನಲ್ಲಿ ನಡೆದ ವಿಶ್ವಹಿಂದು ಧರ್ಮ ಸಮ್ಮೇಳನದಲ್ಲಿ ಶ್ರೀಗಳು ಇತ್ತ ಭಾಷಣ ಉದ್ಬೋಧಕವೂ ಎರಡು ಹೊಸ ರಾಷ್ಟ್ರಗಳ ಮಧುರ ಬಾಂಧವ್ಯವಲ್ಲಿ ಹೊಸ ಸಾಧ್ಯತೆಗಳ ಶೋಧಕವೂ, ಪ್ರಗತಿ ಸಾಧಕವೂ ಆಗಿದ್ದಿತು. ಆ ನಾಡಿನ ಆಕಾಶವಾಣಿ ಶ್ರೀಗಳವರ ಭಾಷಣವನ್ನು ನಾಡಿನುದ್ದಕ್ಕೂ ಬಿತ್ತರಿಸಿತು.

## ರಾಘವೇಂದ್ರ ಸ್ವಾಮಿಗಳ ವೃಂದಾವನಗಳ ಪ್ರತಿಷ್ಠಾಪನೆ

ಶ್ರೀ ರಾಘವೇಂದ್ರ ಸ್ವಾಮಿಗಳು ಕಲಿಯುಗದ ಕಾಮಧೇನು, ನವಯುಗದ ಕಲ್ಪವೃಕ್ಷ. ಅವರ ಪ್ರಭಾವ, ಪವಾಡ, ಭೌತವಾದಕ್ಕೆ ಒಂದು ಉತ್ತರ. ನಾಸ್ತಿಕರ ಸಮಸ್ಯೆಗಳಿಗೆಲ್ಲ ಮಂತ್ರಾಲಯದ ಪ್ರಭುಗಳಲ್ಲಿ ಸಮಂಜಸ ಸಮಾಧಾನವಿದೆ. ಎಂಥ ನಾಸ್ತಿಕರನ್ನೂ ಎಂಥ ಕಲಿಪುರುಷರನ್ನೂ ಆಸ್ತಿಕರನ್ನಾಗಿ,

ಸತ್ಯ ಹರಿಶ್ಚಂದ್ರರನ್ನಾಗಿ ಮಾರ್ಪಡಿಸುವ ಮಂತ್ರಶಕ್ತಿ ಮಂತ್ರಾಲಯ ಪ್ರಭುಗಳಿಗೆ ಇದೆ. ಅವರ ವೃಂದಾವನ ಇದ್ದಲ್ಲೆಲ್ಲ ಪೂಜೆ, ಪುನಸ್ಕಾರ, ಅಷ್ಟೋತ್ತರ, ಪಾರಾಯಣ ಉಪನ್ಯಾಸಗಳು ನಡೆದಿರುತ್ತವೆ. ಆ ಕೇಂದ್ರ ಬಿಂದುವಿನತ್ತ ಆಸ್ತಿಕರು, ನಾಸ್ತಿಕರು, ವಿಜ್ಞಾನಿಗಳು, ಅಜ್ಞಾನಿಗಳು, ತತ್ತ್ವಜ್ಞಾನಿಗಳೂ ಧರ್ಷಿತಾಕರ್ಷಿತ ರಾಗುತ್ತಾರೆ. ಒಂದು ರಾಯರಮಠ ಎಲ್ಲಿಯಾದರೂ ಆದರೆ ಸುತ್ತಲಿನ ವಾತಾವರಣದಲ್ಲಿ ಧರ್ಮಪ್ರಜ್ಞೆ ಮಾಸುವುದಿಲ್ಲ. ನಾಸ್ತಿಕ ಆ ಪರಿಸರವನ್ನು ಮೂಸುವುದಿಲ್ಲ. ಧರ್ಮಪ್ರಜ್ಞೆ ಹಚ್ಚ ಹಸಿರು ಜೀವನದ ಉಸಿರಾಗಿ ಅಲ್ಲಿ ಕಂಗೊಳಿಸುವುದು ಎಂಬುದು ಅನೇಕ ಜನರ ಅನುಭವಕ್ಕೆ ಬಂದ ವಿಷಯ.

ಇದನ್ನು ಅರಿತು ಸಮಾಜದ ನಾಡಿಯನ್ನು ಗುರುತಿಸುವಲ್ಲಿ ಚತುರ ಚಾಣಾಕ್ಷಮತಿಗಳಾದ ಶ್ರೀ ವಿಶ್ವೇಶ ತೀರ್ಥರು ಜನರ ಹೃದಯದ ಹೊಲದಲ್ಲಿ ಧಾರ್ಮಿಕ ಭಾವನೆ ಉತ್ತಿ ಬಿತ್ತಿ ದೈವೀಕತೆಯ ಬೆಳೆ ಬೆಳೆಯುವದಕ್ಕಾಗಿ ಅಲ್ಲಲ್ಲಿ ರಾಘವೇಂದ್ರ ಸ್ವಾಮಿಗಳ ಮೃತ್ತಿಕಾ ವೃಂದಾವನ ಸ್ಥಾಪಿಸುವ ನಿರ್ಧಾರ ಕೈಗೊಂಡರು.

## ನಾಡಿನುದ್ದಕ್ಕೂ ಹರಿಗುರು ಪ್ರತಿಷ್ಠಾಪನೆ

ದಕ್ಷಿಣಕನ್ನಡ ಜಿಲ್ಲೆಯ ಕುಂದಾಪುರ, ಕಾರ್ಕಳ, ಮಂಗಳೂರು, ಕಾಸರಗೋಡು ನಂತರ ಘಟಪ್ರಭಾ, ಹಾಸನ, ಅರಸಿಕೆರೆ, ತಿಪಟೂರು, ಚನ್ನರಾಯಪಟ್ಟಣ, ಗೌರಿಬಿದನೂರು, ಕಾಕಿನಾಡ, ರಾಜಮಹೇಂದ್ರಿ, ವಿಶಾಖಪಟ್ಟಣ, ಭುವನೇಶ್ವರಗಳಲ್ಲಿ ಶ್ರೀ ಪೇಜಾವರ ಶ್ರೀಗಳು ಶ್ರೀ ರಾಘವೇಂದ್ರರ ಮೃತ್ತಿಕಾ ವೃಂದಾವನ ಪ್ರತಿಷ್ಠಾಪನೆ ಮಾಡಿದ್ದಾರೆ, ಇದಲ್ಲದೇ ತಮ್ಮ ಗುರುಗಳಾದ ಶ್ರೀ ಭಂಡಾರಕೆರೆಮಠದ ಶ್ರೀ ವಿದ್ಯಾಮಾನ್ಯ ತೀರ್ಥರ ಜೊತೆಯಲ್ಲಿ ಭದ್ರಾವತಿ, ಹುಬ್ಬಳ್ಳಿ, ಹೈದರಾಬಾದ ಹಾಗೂ ದಿಲ್ಲಿಗಳಲ್ಲಿ ಶ್ರೀ ರಾಯರ ವೃಂದಾವನ ಪ್ರತಿಷ್ಠಾಪಿಸಿದ್ದಾರೆ ಮತ್ತು ಮದ್ದೂರಲ್ಲಿ ಶ್ರೀ ವ್ಯಾಸರಾಯರ ಮಠದ ಸ್ವಾಮಿಗಳ ಜೊತೆಯಲ್ಲಿ, ಶಿರಾದಲ್ಲಿ ಶ್ರೀ ಮಂತ್ರಾಲಯ ಸ್ವಾಮಿಗಳವರ ಜೊತೆಯಲ್ಲಿ ಮತ್ತು ಗುಂಟೂರಲ್ಲಿ ಶ್ರೀ ಉತ್ತರಾದಿಮಠದ ಶ್ರೀಗಳವರ ಜೊತೆಯಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ವೃಂದಾವನ ಹಾಗೂ ಮಾರುತಿ ಮೂರ್ತಿ ಪ್ರತಿಷ್ಠಾಪಿಸಿ ಭಕ್ತ ವೃಂದ ಶ್ರೀರಾಯರ ಹಾಗೂ ಪ್ರಾಣದೇವರ ಅನುಗ್ರಹಕ್ಕೆ ಪಾತ್ರವಾಗಲು ಅವಕಾಶ ಕಲ್ಪಿಸಿಕೊಟ್ಟಿದ್ದಾರೆ.

## ಸುಧಾಮಂಗಳ

'ಶ್ರೀ ಮನ್ನ್ಯಾಯಸುಧ' ಜಯತೀರ್ಥರ ಮೇರು ಕೃತಿ. ದ್ವೈತ ಸಿದ್ಧಾಂತದಲ್ಲಿ ಅದೊಂದು ಉತ್ತುಂಗ ಶೃಂಗ. ''ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ''– ಸುಧೆಯನ್ನಾದರೂ ಓದಬೇಕು. ಇಲ್ಲವೇ ವಸುಧೆಯನ್ನಾದರೂ ಆಳಬೇಕು ಎಂದು ಮಾಧ್ವರ ಜಾಣ್ನುಡಿ – ದಾರ್ಶನಿಕರ ನಾಣ್ನುಡಿ. ಸುಧಾಪಾಠ ಹೇಳುವವರ ಮನೆಯ ಒಂದು ಮೆಟ್ಟಲನ್ನಾಗಿಯಾದರೂ ನನ್ನನ್ನು ಮಾಡು ಎಂದು ಭಕ್ತರು ಭಗವಂತನ್ನು ಬೇಡಿಕೊಂಡಿದ್ದಾರೆ. ಅಂತಹ ೧೨೦೦ ಪುಟದ ಶ್ರೀಮನ್ನ್ಯಾಯಸುಧಾ ಗ್ರಂಥವೆಂಬ ಹೆಬ್ಬೊತ್ತಿಗೆಯನ್ನು ಸಾಗ್ರ ಸಮಗ್ರವಾಗಿ ಶಿಷ್ಯರಿಗೆ ಪಾಠ ಹೇಳಿ ೧೨ ಸಲ ಶ್ರೀ ಶ್ರೀ ಪೇಜಾವರ ಶ್ರೀಗಳು ಸುಧಾಮಂಗಳ ಮಾಡಿದ್ದಾರೆ. ಅವರಲ್ಲಿ ಓದು ಸುಧಾಮಂಗಳ ಮಾಡಿದ ವಿದ್ಯಾರ್ಥಿಗಳ ಸಂಖ್ಯೆ ೨೦೦ಕ್ಕೂ ಮಿಕ್ಕಿದೆ.

ಹಿಂದೆ ಮೋಹಿನಿ ವೇಷದಿಂದ ಭಗವಂತ ಸುಧೆಯನ್ನು ಹಂಚಿದಂತೆ ಶ್ರೀಗಳು ತಮ್ಮ ಸ್ನೇಹಿನಿ ಅಷ್ಟೇ, ಮೋಹಿನಿ ವಾಣಿಯಿಂದ ಸುಧೆಯ ಕಲಶವನ್ನು ಛಾತ್ರ ಪಾತ್ರಗಳಿಗೆ ಬಗ್ಗಿಸಿ, ಹಿಗ್ಗಿಸಿ ದಾಖಲೆಯನ್ನೇ ನಿರ್ಮಿಸಿದ್ದಾರೆ.

ಒಂದೊಂದು ಸಲ ಸುಧಾ ಪಾಠ ಹೇಳಿ ಮುಗಿಸುವುದು ಒಂದು ಅಶ್ವಮೇಧಯಾಗ ಮಾಡಿದಂತೆ. ಅದಕ್ಕೆ ವಿದ್ಯಾರ್ಥಿಗಳೇ ಸಿಕ್ಕುವುದಿಲ್ಲ. ನೂರಾರು ವಿದ್ಯಾರ್ಥಿಗಳನ್ನು ಇಟ್ಟುಕೊಂಡು ಅವರಿಗೆ ಊಟಕ್ಕೆ ಹಾಕಿ ಪಾಠ ಹೇಳಿ ಯೋಗಕ್ಷೇಮ ನೋಡಿಕೊಂಡು, ಸುಧಾಮಂಗಳ ಮಾಡಿ ಪ್ರತಿಯೊಬ್ಬ ವಿದ್ಯಾರ್ಥಿಗೂ ಮಂಗಳ ಕಾಲದಲ್ಲಿ ಬಂಗಾರದ ತುಳಸಿ ಮಾಲೆ, ಶಾಲು ಜೋಡಿ, ಕೈತುಂಬ ದಕ್ಷಿಣೆ, ತಲೆತುಂಬ ಜ್ಞಾನ, ಹೃದಯ ತುಂಬ ಹಿಗ್ಗನ್ನು ತುಂಬಿ ಕಳಿಸಿದ ಶ್ರೀಗಳವರ ಗೈಮೆ, ಗಿನ್ನಿಸ ಬುಕ್ಕಿನಲ್ಲಿ ದಾಖಲಿಸುವಷ್ಟು ಮೈಮೆಯಿಂದ ಒಡಗೂಡಿದೆ ಎಂದರೆ ಅತಿಶಯೋಕ್ತಿ ಎನಿಸದು.

## ಸಂಪುಟಾಕಾರವಾಗಿ ಸುಧಾಮಂಗಳ

ಶ್ರೀ ಶ್ರೀಗಳವರ ಮೊಟ್ಟ ಮೊದಲನೆಯ ಸುಧಾಮಂಗಳ ಉಡುಪಿಯ ಶ್ರೀ ಕೃಷ್ಣನ ಸನ್ನಿಧಾನದಲ್ಲಿ ಅಷ್ಟಮಠಾಧೀಶರ ಉಪಸ್ಥಿತಿಯಲ್ಲಿ ಆ ಕಾಲದ ದಿಗ್ಗಜ ಪಂಡಿತರ ಸಮ್ಮುಖದಲ್ಲಿ ವೈಭವದಿಂದ ನೆರವೇರಿತು. ಎರಡನೆಯ ಸುಧಾಮಂಗಳವು ಅದೇ ಉಡುಪಿಯಲ್ಲಿ ದ್ವಿತೀಯವಾದರೂ ಅದ್ವಿತೀಯವಾಗಿ ನೆರವೇರಿದ್ದು ಚರಿತ್ರಾರ್ಹ ಸಂಗತಿ, ಆದರೆ ಅಂತೇಚ ಮಧ್ಯೇಚ ಎಂದು ಹೇಳುವಂತೆ ತಮ್ಮ ಎರಡನೆಯ ಪರ್ಯಾಯದ ಮೊದಲು ಹಾಗೂ ಕಡೆಗೆ ಸಂಪುಟಾಕಾರವಾಗಿ ಸುಧಾಮಂಗಳ ಮಾಡಿ ಗುರು ಶಿಷ್ಯರಿಬ್ಬರಿಗೂ ಮಂಗಲ ತರಂಗಿತವಾಗುವಂತೆ ಮಾಡಿದ್ದಾರೆ.

## ಬೆಂಗಳೂರಿನಲ್ಲಿ ಮಂಗಳ

ಅನಂತರದಲ್ಲಿ ಬೆಂಗಳೂರಿನಲ್ಲಿ ಪಂಡಿತ ತಂಡದ ನಿರ್ಮಾಣದ ಕಮ್ಮಟದಂತಿರುವ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿಯೇ ಅಲ್ಲಿಯ ವಿದ್ಯಾರ್ಥಿಗಳಿಗೆ ಬಾಧಾಂತ ತರ್ಕಪಾಠ ಹೇಳಿ, ಸುಧಾಂತ ವೇದಾಂತ ಕಲಿಸಿ, ಸುಧಾಮಂಗಳ ಮಾಡಿದ ಅಪೂರ್ವ ಘಟನೆ ವೈಭವೋಪೇತವಾಗಿ ನಾಲ್ಕು ಸಲ ನಡೆಯಿತು.

ಮಧ್ವಮುನಿಗಳ ಸೋದರರಾದ ವಿಷ್ಣುತೀರ್ಥರು ವಾದಮಾಡಿ ಗೆದ್ದುಕೊಂಡ ಸುಬ್ರಹ್ಮಣ್ಯ ಮಠ ದಕ್ಷಿಣಕನ್ನಡದ ಪ್ರಾಂಥಭಾಗದಲ್ಲಿ ಮಾಧ್ವರ ಗೆಲುವಿನಗಂಬವಾಗಿ ನಿಂತಿದೆ. ಆ ಮಠದ ವಿದ್ಯಾಭೂಷಣ ತೀರ್ಥ ಶ್ರೀಪಾದಂಗಳವರು ತಮ್ಮ ಕಿನ್ನರ ಕಂಠದ ಮಧುರನಾದ ತರಂಗಗಳಿಂದ ರಸಿಕರ ಅಂತರಂಗಗಳಿಗೆಲ್ಲ ಭಕ್ತಿಯ ಗುಂಗು ಹಿಡಿಸಿದ ನಾದಯೋಗಿ ಸ್ವಾಮಿಗಳು. ಅವರು ಪೇಜಾವರ ಶ್ರೀಗಳವರಲ್ಲಿ ಶಿಷ್ಯತ್ವ ವಹಿಸಿ ಆಚೂಲ ಮೂಲವಾಗಿ ಸುಧಾಂತ ವೇದಾಂತ ಓದಿದರು. ಅವರ ತಪೋಭೂಮಿಯಾದ ಸುಬ್ರಹ್ಮಣ್ಯದಲ್ಲಿ ಅತ್ಯಂತವಿಜೃಂಭಣೆಯಿಂದ ಸುಧಾಮಂಗಳ ಮಹೋತ್ಸವವು ನೆರವೇರಿತು.

## ಬದರಿಯಲ್ಲಿ ವ್ಯಾಸ -ಮಧ್ವರ ಎದುರಿನಲ್ಲಿ

ಬದರಿ ಭಾರತೀಯರ ಪರಮ ಪವಿತ್ರ ಪುಣ್ಯಕ್ಷೇತ್ರ. 'ನೇ ದೃಶಮ್ ಸ್ಥಲಮ್' ಇಂಥ ಪುಣ್ಯಕ್ಷೇತ್ರವೇ ಇಲ್ಲವೆಂದು ಸ್ವಯಂ ಮಧ್ವಾಚಾರ್ಯರೇ ಅಪ್ಪಣೆ ಕೊಡಿಸಿದ್ದಾರೆ. ಶ್ರೀಮಧ್ವಾಚಾರ್ಯರು ಅಲ್ಲಿ ಇನ್ನೂ ಬದುಕಿ ಇದ್ದು ವೇದವ್ಯಾಸರ ಸೇವೆ ಮಾಡುತ್ತಿದ್ದಾರಂತೆ. ಅದೃಶ್ಯೋ ರೌಪ್ಯಪೀಠೇಸ್ತಿ ದೃಶ್ಯೋಽಸ್ತಿ ಬದರೀ ತಟೀ ಎಂದು ಉಡುಪಿಯಲ್ಲಿ ಕಣ್ಣಿಗೆ ಕಾಣದೇ ಬದರಿಯಲ್ಲಿ ಲೋಚನಗೋಚರರಾಗಿ ಮಧ್ವಾಚಾರ್ಯರು ಇರುತ್ತಾರೆ ಎಂದು ಒಂದು ಮಾಧ್ವರ ಪರಿಕಲ್ಪನೆ. ಬದರಿಯಲ್ಲಿ ಸಾಕ್ಷಾತ್ ಸನ್ನಿಹಿತರಾದ ಮಧ್ವಾಚಾರ್ಯರ ಎದುರಿಗೆ ಅವರ ಅಣುವ್ಯಾಖ್ಯಾನ, ಬ್ರಹ್ಮಸೂತ್ರಭಾಷ್ಯ, ಗೀತಾಭಾಷ್ಯಗಳ ಮಂಗಳ ಮಾಡುವ ಹಮ್ಮು ಹವಣುಗಳು ಶ್ರೀ ಶ್ರೀಗಳವರದು. ಮಧ್ವಭಾಷ್ಯ, ಗೀತಾಭಾಷ್ಯಗಳ ಮಂಗಳವನ್ನು ಬದರಿಯಲ್ಲಿ ಮೊದಲು ಮಾಡಿದ ಶ್ರೀ ಪೇಜಾವರ ಶ್ರೀಗಳು, ಎರಡು ಸಲ ಬದರಿ ನಾರಾಯಣನ ಪಾದ ಸನ್ನಿಧಿಯಲ್ಲಿಯೇ

ಪರಿಣತ ಪ್ರಜ್ಞರಾದ ಪ್ರೌಢ ವಿದ್ಯಾರ್ಥಿಗಳಿಗೆ ಸುಧಾಮಂಗಳ ಮಾಡಿ ಆ ಪುಣ್ಯವನ್ನು ಶ್ರೀಹರಿಯ ಪಾದಾರವಿಂದಗಳಲ್ಲಿ ಸಮರ್ಪಣ ಮಾಡಿದರು.

ಅದರಂತೆ ಭೂವೈಕುಂಠವೆನಿಸಿದ ತಿರುಪತಿ ಕ್ಷೇತ್ರದಲ್ಲಿಯೂ ಶ್ರೀಗಳು ತಮ್ಮ ಷಷ್ಟ್ಯಬ್ಧಿಪೂರ್ತಿ ಸಮಾರಂಭದ ಜೊತೆಗೆ ಸುಧಾಮಂಗಳ ಮಾಡಿ ನೂರಾರು ಜನರಿಗೆ ರಜತಪಾತ್ರಗಳನ್ನು ದಾನವಿತ್ತರು. ರಜತಪೀಠದಲ್ಲಿಯ ಸ್ವಾಮಿಗಳಲ್ಲವೇ ವಿಶ್ವೇಶತೀರ್ಥರು !

## ಬದರಿ ಯಾತ್ರೆ-ಭಕ್ತಿ ರಥ ಯಾತ್ರೆ

ಬದರಿ ಒಂದು ಪಾವನತಮವಾದ ಪುಣ್ಯಧಾಮ. ಗುರು ಮಧ್ವರು-ಹರಿವ್ಯಾಸರು ನಿತ್ಯ ನೆಲೆನಿಂತ ಪವಿತ್ರ ತಾಣ, ಅಲ್ಲಿಗೆ ಪೇಜಾವರ ಶ್ರೀ ಪಾದಂಗಳವರು ಐದು ಬಾರಿ ದಿಗ್ವಿಜಯ ಮಾಡಿ ಸಾವಿರಾರು ಜನರನ್ನು ಕೂಡ ತಮ್ಮ ಜೊತೆಗೆ ಕರೆದುಕೊಂಡು ಹೋಗಿ ಜ್ಞಾನಪ್ರದಾನ ಪುಣ್ಯಪ್ರದಾನ ಅನ್ನದಾನಗಳನ್ನು ನೆರವೇರಿಸಿದ್ದಾರೆ. ಬದರಿಯೆಂದರೆ ಮಾಧ್ವೇತರ ಮತೀಯರದೇ ಮೇಲುಗೈ ಆಗಿರುವ ಒಂದು ಪುಣ್ಯಪೀಠ ಎಂದು ಹಿಂದೆ ಆಗಿದ್ದಿತು. ಮುಖ್ಯವಾಗಿ ಗುರುಮಧ್ವರು ಅಲ್ಲಿಗೈದ ಗೈಮೆ ಮೈಮೆಗಳು ಜನರ ಮನಸ್ಸಿನಿಂದ ಮರೆಯಾಗಿದ್ದವು. ಅಲ್ಲಿ ಮಾಧ್ವರಿಗೆ ಬೆಲೆ ಇಲ್ಲ. ಎಂದಾದರೂ ಹೋದವರಿಗೆ ನಿಲ್ಲಲು ನೆಲೆ ಇಲ್ಲ. ಈ ದಯನೀಯ ಸ್ಥಿತಿಯನ್ನು ಕಂಡು ಮಮ್ಮಲ ಮರುಗಿದ ಶ್ರೀ ಪೇಜಾವರ ಶ್ರೀಗಳು ಅಲ್ಲಿಯ ಅಲಕನಂದೆಯ ದಂಡೆಯ ಮೇಲೆ ಒಂದು ಮಾಧ್ವ ಮಠವನ್ನು ಕಟ್ಟಲು ಸಂಕಲ್ಪಿಸಿದರು. ಉಡುಪಿಯಲ್ಲಿಯೇ ಆ ತಮ್ಮ ಸಂಕಲ್ಪವನ್ನು ಕೃಷ್ಣನ ಸನ್ನಿಧಿಯಲ್ಲಿ ಘೋಷಿಸಿದರು. ಹಣ ಹುಚ್ಚು ಹೊಳೆಯಾಗಿ ಹರಿದುಬಂದಿತು. ಅನೇಕ ಲಕ್ಷ ರೂ.ಗಳನ್ನು ಸಂಗ್ರಹಿಸಿ ಹಿಮಾಲಯದ ಆ ಎತ್ತರದಲ್ಲಿ ಬದರಿಯ ಬಿತ್ತರದಲ್ಲಿ ನಾರಾಯಣನ ಗುಡಿಯ ಹತ್ತಿರದಲ್ಲಿ ಅನಂತಮಠವನ್ನು ನಿರ್ಮಿಸಿದರು.

## ಬರಿಯ ಮಠ ನಿರ್ಮಿಸಿದರೆ ಸಾಕೆ ?

ಅಲ್ಲಿ ಮಧ್ವಮತದ ಪ್ರತಿಷ್ಠೆಯೂ ಆಗಬೇಕು. ಅದರ ಪೂರ್ವಭಾವಿಯಾಗಿ ಮಧ್ವಾಚಾರ್ಯರ ಮೂರ್ತಿ ಪ್ರತಿಷ್ಠೆಯೂ ಆಗಬೇಕು. ಆ ಮಂಗಳ ಪ್ರಸಂಗವನ್ನು ಭಾರತದ ಸಹಸ್ರಾರು ಭಕ್ತಿ ಭಾವುಕರ ಕೌತುಕದ ಕಂಗಳು ಕಾಣಬೇಕು ಎಂಬ ಹೆಬ್ಬಯಕೆಯನ್ನು ಹೊತ್ತು ಶ್ರೀಗಳವರು ಪುಣ್ಯಕ್ಷೇತ್ರ ಯಾತ್ರಿಕರ ಒಂದು ದಿಬ್ಬಣವನ್ನೇ ಹೊರಡಿಸಿದರು.

೧೯೭೪ರಲ್ಲಿ ಅನಂತಮಠದ ಶಂಕುಸ್ಥಾಪನೆಗೆ ತಮ್ಮ ವಿಶಿಷ್ಟ ಶಿಷ್ಯಪರಿವಾರದೊಂದಿಗೆ ಶ್ರೀಗಳವರು ಆ ವಿಶಾಲಾ ಕ್ಷೇತ್ರಕ್ಕೆ ಬಿಜಯಂಗೈದರು. ೧೯೭೮ರಲ್ಲಿ ಬದರಿಯಲ್ಲಿ ರೂಪುಗೊಂಡ ದಿವ್ಯ-ಭವ್ಯವಾದ ಅನಂತಮಠದ ಉದ್ಘಾಟನೆಯನ್ನು ನೆರವೇರಿಸಿದರು.

## ವಿಶಾಲಾ ನಗರಿಯಲ್ಲಿ ವಿಶಾಲ ಮಂದಿರ

೧೯೮೩ರಲ್ಲಿ ವಿಶಾಲಾ ನಗರಿಯಲ್ಲಿ ಕಟ್ಟಿಸಿದ ವಿಶಾಲವಾದ ಆ ಮಾಧ್ವಮಂದಿರದಲ್ಲಿ ಸುಂದರ ವಾದ ಆನಂದತೀರ್ಥರ ಚರಸ್ವರೂಪ ಉತ್ಸವ ಮೂರುತಿಯನ್ನು ಎದ್ದು ತೋರುವಂತೆ ನಿಲ್ಲಿಸಿದರು. ಅನಂತರ ಆ ಅನಂತಮಠದಲ್ಲಿ ಗುರುಮಧ್ವರ ಸ್ಥಿರಮೂರ್ತಿಯನ್ನು ನಿಲ್ಲಿಸಲಿಕ್ಕಾಗಿ ಎಲ್ಲ ಬಗೆಯ ಸಿದ್ಧತೆ ಮಾಡಿದರು.

ಮಧ್ವಾಚಾರ್ಯರ ೭೫೦ನೇ ವರ್ಷದ ಸಪ್ತಶತಮಾನೋತ್ಸವವನ್ನು ಸಮಗ್ರ ಭಾರತದ ತುಂಬ ತುಂಬು ಸಂಭ್ರಮದಿಂದ ವಿಜೃಂಭಣೆ ಪೂರ್ವಕವಾಗಿ ಆಚರಿಸುವಂತಾಗಬೇಕೆಂಬುದು ಶ್ರೀ ಪೇಜಾವರದ

ಶ್ರೀಗಳವರ ಹೆಬ್ಬಯಕೆ. ಈ ಸಪ್ತಶತಮಾನೋತ್ಸವದ ನಿಮಿತ್ತದಿಂದ ಪ್ರತಿಯೊಬ್ಬ ವೈಷ್ಣವ ಆಸ್ತಿಕನ ಮನೋಮಂದಿರದಲ್ಲಿ ಮಧ್ವಾಚಾರ್ಯರ ಮೂರ್ತಿಯನ್ನು ಮೂಡಿಸಬೇಕು, ಕೂಡಿಸಬೇಕು ಎಂಬ ಹಿರಿಯ ಹಂಬಲ ಹೊತ್ತು, ಸ್ವಾಮಿಗಳವರು ಅನೇಕ ಕಾರ್ಯಕ್ರಮ ರೂಪಿಸಿದರು.

## ಸಪ್ತಶತಮಾನೋತ್ಸವ

ಉಡುಪಿಯಲ್ಲಿ ಆ ಸಪ್ತಶತಮಾನೋತ್ಸವವನ್ನು ವೈಭವದಿಂದ ಆಚರಿಸಿ ಮೂರು ತಲೆಮಾರುಗಳಿಂದ ಉಡುಪಿಗೇ ಬಾರದಿರುವ ಶ್ರೀಮದ್ ಉತ್ತರಾದಿಮಠದ ಸ್ವಾಮಿಗಳವರನ್ನು ಬರಮಾಡಿಕೊಂಡು ಉಡುಪಿಯ ಹಾಗೂ ಮಾಧ್ವರ ಇತಿಹಾಸದಲ್ಲಿ ಒಂದು ಸುವರ್ಣ ಸಂಪುಟವನ್ನು ತೆರೆದರು. ಸ್ನೇಹ ಸಾಮರಸ್ಯದ ಸೌಹಾರ್ದ ಸಂವರ್ಧನೆಗೆ ಸೂತ್ರಪಾತವನ್ನು ಮಾಡಿದರು. ತಾವೇ ಭಕ್ತಿರಥ ಸೂತ್ರಧಾರರೂ, ಪಾತ್ರಧಾರರೂ ಆದರು.

ಸಾವಿರ ಸಾವಿರ ಭಕ್ತ ಜನರಿಗೆ ಭಗವಂತನ ಹಾಗೂ ಮಧ್ವಾಚಾರ್ಯರ ದರ್ಶನ ಮಾಡಿಸುವ ಕನಸು ಶ್ರೀಗಳವರದು. ಆ ಕನಸನ್ನು ನನಸಾಗಿಸಲು ಭಕ್ತಿರಥ ಯಾತ್ರೆ ಹೊರಡಿಸಿದರು. ಉಡುಪಿಯ ಶ್ರೀಕೃಷ್ಣ ಸನ್ನಿಧಾನದಿಂದ ಹೊರಟ ಭಕ್ತಿರಥ ಮಧ್ವಾಚಾರ್ಯರ ಮುದ್ದು ಮೂರುತಿಯನ್ನು ಹೊತ್ತು ರಥಾರೂಢವಾಗಿ ರಾಜಧಾನಿ ಬೆಂಗಳೂರಿಗೆ ಬಂದಾಗ ಸಹಯಾತ್ರಿಕರ ಸಂಖ್ಯೆ ಸಾವಿರಕ್ಕೂ ಮಿಕ್ಕಿತು. ಐವತ್ತು ಬಸ್ಸುಗಳು ತುಂಬಿದರೂ ಇಂಬು ಸಾಲದೇ ಎಷ್ಟೋ ಜನರು ಕಾರು, ವ್ಯಾನು, ಟ್ರೇನು, ಪ್ಲೇನುಗಳಿಂದ ಬದರಿಗೆ ಶ್ರೀ ಶ್ರೀಗಳವರನ್ನು ಹಿಂಬಾಲಿಸಿದರು.

ಯತಿಗಳ ಸಮೂಹವೇ ಹರಿ-ಗುರುಗಳ ದರ್ಶನಕ್ಕಾಗಿ ಆತುರ, ಕಾತರ ಕೌತುಕದ ಕೊನೆಯೇರಿ ವಿಶ್ವೇಶತೀರ್ಥರ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ಬದರಿಯಾತ್ರೆಗೆ ಹೊರಟಿತು. ತಂಡತಂಡವಾಗಿ ಯಾತ್ರಿಕರು ದಿಬ್ಬಣದ ಉಬ್ಬಿನಿಂದ ಬದರಿ ದರ್ಶನ ಉತ್ಸಾಹದಿಂದ ಶ್ರೀಗಳವರನ್ನು ಬೆಂಬಲಿಸಿ ಹೊರಟ ಈ ಯಾತ್ರಾರ್ಥಿಗಳಿಗೆಲ್ಲ ದಾರಿಗುಂಟ ತಿಂಡಿ ತೀರ್ಥ ಸಕಾಲಕ್ಕೆ ಊಟ ಉಪಚಾರ, ಅಳಿಯತನ ನಡೆದಂತೆ ನಡೆಯಿತು. ೧೯೮೯ರಲ್ಲಿ ಮಾರ್ಚ್ ತಿಂಗಳಿನಿಂದ ಪರಶುರಾಮ ಕ್ಷೇತ್ರದ ಘಟ್ಟ ಏರಿ ಮೇಲೆ ಬಂದ ಈ ಯಾತ್ರಾರ್ಥಿ ತಂಡಕ್ಕೆಲ್ಲ ಎಲ್ಲೆಡೆ ಅದ್ದೂರಿಯ ಸ್ವಾಗತ. ಯತಿ ವೃಂದದ ನಡುವೆ ಆನಂದತೀರ್ಥರ ಸುಂದರ ಮೂರ್ತಿಯನ್ನು ಸಾಕ್ಷಾತ್ತಾಗಿ ಕಂಡ ಭಕ್ತರ ಹೃದಯದಲ್ಲಿ ಆನಂದದ ತುಳುಕು ಮೈತುಂಬ ಪುಳಕು. ಜನ ತಾ ಮುಂದು ನಾ ಮುಂದು ಎಂದು ಮುಗಿಬಿದ್ದು ಕಾಣಿಕೆ ಅರ್ಪಿಸಿದರು. ಅನೇಕರು ಯಾತ್ರಾರ್ಥಿಗಳಾಗಿ ಬೆಂಬತ್ತಿ ಬದರಿ ವರೆಗೆ ತೆರಳಿದರು.

## ಜೀವೋತ್ತಮರ ಜೈತ್ರ ಯಾತ್ರೆ

ದಕ್ಷಿಣ ಭಾರತದ ಕೇರಳ, ಕರ್ನಾಟಕ, ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ಪ್ರಾಂತಗಳ ದಿಗ್ವಿಜಯ ಪೂರೈಸಿಕೊಂಡು ಮುಂಬೈ ಮಾರ್ಗವಾಗಿ ಬರೋಡಾ, ಅಹಮ್ಮದಾಬಾದ, ಜಯಪುರ, ದಿಲ್ಲಿಗೆ ಜೈತ್ರ ಯಾತ್ರೆ ಐತಂದಿತು. ಅಲ್ಲಿ ಕೇಂದ್ರ ಸರಕಾರದ ಅಧಿಕಾರಿಗಳು ಅನೇಕ ಔತ್ತರೇಯ ಭಕ್ತಿಭಾವುಕರು ಹೃದಯ ತುಂಬಿ ಮಧ್ವಮೂರ್ತಿಗೆ ಸ್ವಾಗತ ನೀಡಿದರು. ಅಲ್ಲಿಂದ ಹರಿದ್ವಾರ, ಹೃಷಿಕೇಶ ದ್ವಾರಾ ಬದರಿಯನ್ನು ಮುಟ್ಟಿದಾಗ ಯಾತ್ರಿಗಳ ಸಂಖ್ಯೆ ೩೦೦೦ಕ್ಕೂ ಮಿಕ್ಕಿತು. ಅಲ್ಲಿ ಶಾಸ್ತ್ರೋಕ್ತವಿಧಿಯಿಂದ ದಿಕ್ಕು ದಿಕ್ಕುಗಳಲ್ಲಿ ದಕ್ಷಿಣೋತ್ತರ ದೇಶ ವಿದೇಶಗಳಲ್ಲಿ ದಿಗ್ವಿಜಯ ಮಾಡಿಕೊಂಡು ಬಂದ ಮಧ್ವಾಚಾರ್ಯರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಯಿತು. ಈ ಉತ್ಸವದಿಂದ ಉತ್ತರ ಹಿಂದುಸ್ತಾನದ ಜನರಿಗೆಲ್ಲ ಮಧ್ವಾಚಾರ್ಯರ ಎಂದರೆ ಯಾರು ? ಅವರ ಮಹಿಮೆ ಏನು ? ಅವರ ಗರಿಮೆ ಏನು ಎಂಬುದರ ಅರಿವು

ಮೂಡಿತು. ಬೇಳೆ ಬೇಯದ, ಅನ್ನ ಕುದಿಯದ ಆ ತಂಪಿನ ತಾಣದಲ್ಲಿ ಸಹಸ್ರ ಸಹಸ್ರ ಜನರಿಗೆ ನಳಪಾಕ, ರಸಪಾಕ, ಒದಗಿಸಿ ಕೂತಲ್ಲಿ ಕಾಫಿ, ನಿಂತಲ್ಲಿ ನೀರು, ತಂಗಿದಲ್ಲಿ ಉಪಹಾರ, ಉಂಡಲ್ಲಿ ಊಟದ ಏರ್ಪಾಟು ಮಾಡಿದ್ದು ಶ್ರೀ ಶ್ರೀಗಳವರ ಕರ್ತೃತ್ವ ಶಕ್ತಿಯ ಕಳಸವೆನಿಸಿತು.

ಬದರಿಯಲ್ಲಿ ಮಧ್ವಾಚಾರ್ಯರ ಮೂರ್ತಿ ಪ್ರತಿಷ್ಠಾಪನೆಯೊಂದಿಗೆ ಶ್ರೀ ಶ್ರೀಗಳು ತಮ್ಮ ಪಾಠ ಪ್ರವಚನ, ಸಂದೇಶ, ಉಪದೇಶ, ಆದೇಶಗಳಿಂದ ಉತ್ತರ ಪಥದಲ್ಲಿ ಮತ್ತೊಮ್ಮೆ ಮಧ್ವಮತದ ಪ್ರತಿಷ್ಠಾಪನೆ ನೆರವೇರಿಸಿದಂತಾಯಿತು. ಔತ್ತರೇಯರ ಚಿತ್ತ ಭಿತ್ತಿಯಲ್ಲಿ ಮತ್ತೊಮ್ಮೆ ಹರಿ-ಗುರು ಭಕ್ತಿಯ ಪ್ರಾಣಪ್ರತಿ ಷ್ಠಾಪನೆ ಆದಂತಾಯಿತು.

ಅಲ್ಲಿ ತಾವು ಪ್ರತಿಷ್ಠಾಪಿಸಿದ ಮಧ್ವಮೂರ್ತಿಯ ದರ್ಶನ ನಾಡಿನ ಜರಿಗೆಲ್ಲ ಮೂಡಿಸಲು ಶ್ರೀ ಶ್ರೀಗಳವರು ಶ್ರೀ ಮಧ್ವಾಚಾರ್ಯರ ಉತ್ಸವದ ಚರಮೂರ್ತಿಯನ್ನು ಭಕ್ತಿರಥದಲ್ಲಿ ಕುಳ್ಳಿರಿಸಿಕೊಂಡು ಮರಳಿ ಪುನರ್ ಯಾತ್ರೆ ಪ್ರಾರಂಭಿಸಿದರು. ಬರುವಾಗ ಅಯೋಧ್ಯಾ, ಕಾಶಿ, ಪ್ರಯಾಗ, ಗಯಾ, ಕಲಕತ್ತಾ, ಭುವನೇಶ್ವರ, ಪುರಿ, ವಿಶಾಖಾಪಟ್ಟಣ, ವಿಜಯವಾಡಾ ಮುಖಾಂತರ ಉಡುಪಿಗೆ ಚಿತ್ತೈಯಿಸಿದರು. ಆ ಸರ್ವಜ್ಞಾಚಾರ್ಯರ ಶ್ರೀಕೃಷ್ಣನ ಅಡಿದಾವರೆಗಳಲ್ಲಿ ಕೃಷ್ಣಾರ್ಪಣ ಎಂದು ಆ ಪುಣ್ಯವನ್ನು ಅರ್ಪಿಸಿದರು.

## ವಿದ್ವತ್ ಸಭೆ-ವಾಕ್ಯಾರ್ಥ

ಶ್ರೀ ಪೇಜಾವರ ಶ್ರೀಪಾದಂಗಳವರು ಚತುರಸ ಪಾಂಡಿತ್ಯದ ಚತುರಮತಿ ಯತಿಗಳು. ಅವರು ಸ್ವಭಾವತಃ ಮೃದು ಮಧುರರಾದರೂ ವಾದ ವೇದಿಕೆಯಲ್ಲಿ ಅಬ್ಬರಿಸುವ ಹೆಬ್ಬುಲಿ. ಗುಡುಗುವ ಸಿಂಹ, ಕೋಟಿಕ್ರಮದ ವಾಕ್ಯಾರ್ಥ ಪ್ರಕ್ರಮದಲ್ಲಿ ಅವರದು ತ್ರೈವಿಕ್ರಮ, ವಿಕ್ರಮ. ಎಲ್ಲಿ ಹೋದಲ್ಲೆಲ್ಲ, ವಾದ ಸಭೆಗಳಲ್ಲಿ ಅವರದೇ ಒಂದು ಕ್ರಮ. ವಾಕ್ಯಾರ್ಥದ ರಂಗಭೂಮಿಯಲ್ಲಿ ಅವರ ಪಟ್ಟು, ವರಸೆಗಳನ್ನು ಕಂಡು ಎಲ್ಲ ಮತೀಯ ಪ್ರಕಾಂಡ ಪಂಡಿತರೂ ಕೂಡ ದಿಗ್ಭ್ರಮೆಗೊಂಡದ್ದುಂಟು. ಶ್ರೀ ಶ್ರೀಗಳು ನಡೆಸಿದ ಅಂತಹ ವಾಕ್ಯಾರ್ಥ ಗೋಷ್ಠಿಗಳು ವಿದ್ವತ್ ಸಭೆಗಳು ನೂರಾರು. ಇಲ್ಲಿ ಅವಕಾಶವಿಲ್ಲದ್ದರಿಂದ ಅಂಥ ನಾಲ್ಕು ಪ್ರಸಂಗಗಳನ್ನು ಮಾತ್ರ ಉಲ್ಲೇಖಿಸಲಾಗುವುದು.

ಸ್ವಾಮಿಗಳವರ ಎಳಮೆಯಲ್ಲಿಯೇ ಅವರ ಪ್ರತಿಭೆಗೊಂಚಲುಗಟ್ಟಿ, ಮಿಂಚಾಡಿದುದು ಹಲವಾರು ಸನ್ನಿವೇಶಗಳಲ್ಲಿ ಜನರಿಗೆ ದೃಗ್ಗೋಚರವಾಯಿತು.

ಶ್ರೀ ಭಂಡಾರಕೆರೆ ಮಠದಲ್ಲಿ ಇನ್ನೂ ಆಗ ಸುಧಾ ಪಾಠ ಶ್ರೀಗಳವರಿಗೆ ಆಗುತ್ತಿತ್ತು. ಆದರೂ ಬುದ್ಧಿ ಹರಿತ. ವಾಕ್ಯಾರ್ಥ ವಾದವಿವಾದ ಎಂದ ಕೂಡಲೇ ಉತ್ಸಾಹದಿಂದ ಹುರುಪುಗೊಂಡು ಭಾಗವಹಿಸುವ ಹಂಬಲ. ಆಗ ದಕ್ಷಿಣ ದೇಶದ ದಿಗ್ಗಜ ಪಂಡಿತರಾದ ತರ್ಕಕೇಸರಿ ವಿಜಯೀಂದ್ರ ಆಚಾರ್ಯರು, ವೇದಾಂತದಲ್ಲಿ ಪೇಜಾವರದ ಶ್ರೀಗಳವರ ಜೊತೆಗೆ ಬಹಳ ಹೊತ್ತು ವಾಕ್ಯಾರ್ಥ ಮಾಡಿದರು. ಚಿಕ್ಕ ವಯಸ್ಸಿನ ಚತುರಮತಿಯ ಈ ಚಾಣಾಕ್ಷ ಸುಧಾಛಾತ್ರರನ್ನು ಆ ತರ್ಕ ಪಂಡಿತರು, ಅಡ್ಡಾದಿಡ್ಡಿ ಪುಂಖಾನು ಪುಂಖವಾಗಿ ಪ್ರಶ್ನೆಗಳನ್ನು ಒಡ್ಡಿ ಕೆಣಕಿದರು. ಅವರ ಎಲ್ಲ ವಕ್ರೋಕ್ತಿ ವಿಕ್ರಮಗಳಿಗೆ ಸೊಪ್ಪು ಹಾಕದೇ ಶಾಂತರೀತಿಯಿಂದ ಶ್ರೀಗಳು ನಿಶ್ಶಂಕಾತುರರಾಗಿ ಸಮಂಜಸ ಉತ್ತರವನ್ನು ಹೇಳಿದರು. ಇವರ ಕೂಲಂಕಷ ಸುಧಾಪಾಂಡಿತ್ಯ ಸರ್ವಂಕಷ ವಿಮರ್ಶನ ಶಕ್ತಿಗಳನ್ನು, ವಾಕ್ಯಾರ್ಥ ನೈಪುಣ್ಯಗಳನ್ನು ಕಂಡು ಆ ತರ್ಕಕೇಸರಿಯು ಬೆಕ್ಕಸ ಬೆರಗಾಗಿ ತಲೆದೂಗಿದರು. ಅವರ ಗುರುಗಳಾದ ಭಂಡಾರಕೆರೆ ಸ್ವಾಮಿಗಳ ಹತ್ತಿರ ಬಂದು ''ಈ ನಿಮ್ಮ ಬಾಲಯತಿಗಳು ಇನ್ನು ಸ್ವಲ್ಪೇ ದಿನಗಳಲ್ಲಿ ವೇದಾಂತ ವಾಚಸ್ಪತಿಗಳಾಗುವರು'' ಎಂದು ಭವಿಷ್ಯ ನುಡಿದರು.

## ಕೊಚ್ಚಿಯಲ್ಲಿ ಉಚ್ಚಕೋಟಿಕ್ರಮ ವಾಕ್ಯಾರ್ಥ

ಕೊಚ್ಚಿಯಲ್ಲಿ ಮತ್ತೊಂದು ಪ್ರಸಂಗ, ಕೊಚ್ಚಿಯ ಮಹಾರಾಜರು, ಪ್ರಾಚೀನ ನ್ಯಾಯದಲ್ಲಿಯೂ, ನವೀನ ನ್ಯಾಯದಲ್ಲಿಯೂ ಸಮೀಚಿನ ಪಂಡಿತರು, ಅರ್ವಾಚೀನ ಕಾಲದಲ್ಲಿ ಈ ಮಟ್ಟ ಮುಟ್ಟಿದ ಪಂಡಿತರಾಜರು ಅತ್ಯಂತ ವಿರಳ. ಆದೊರೆ ಶ್ರೀಮಂತರಿದ್ದಷ್ಟೇ ಧೀಮಂತರೂ ಕೂಡ. ತರ್ಕ ಶಾಸ್ತ್ರದಲ್ಲಿ ತಲಸ್ಪರ್ಶಿ ಪಾಂಡಿತ್ಯ, ನ್ಯಾಯಶಾಸ್ತ್ರದ ದಿನಕರಿ ಗ್ರಂಥಕ್ಕೆ ವ್ಯಾಖ್ಯಾನ ಬರೆದು ಪ್ರಖ್ಯಾತರಾದ ಪಂಡಿತರಾಜ ಶ್ರೀಗಳವರು ಸಂಚಾರತ್ವೇನ ಕೊಚ್ಚಿಗೆ ಹೋದಾಗ ಅವರು ಶ್ರೀಗಳವರನ್ನು ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡರು. ಆಸ್ಥಾನ ವಿದ್ವಾಂಸರ ಸಮ್ಮುಖದಲ್ಲಿಯೇ ದಿನಕರಿ ಗ್ರಂಥದಲ್ಲಿಯೇ ವಾಕ್ಯಾರ್ಥ ಪ್ರಾರಂಭವಾಯಿತು. ಶ್ರೀಗಳವರು ತಮ್ಮ ವಾಗ್ವೈಖರಿಯಿಂದ ದಿನಕರಿಯ ಜೊತೆಗೆ ಮಂಜೂಷಾ, ಪ್ರಭಾ ಮೊದಲಾದ ವ್ಯಾಖ್ಯಾನಗಳ ವಿಷಯಗಳನ್ನು ಕೂಡಾ ಇಟ್ಟು ತೂಗಿ ತಿಕ್ಕಿ ಒರೆಗೆ ಹಚ್ಚಿ ವಿವರಿಸಿದಾಗ ಮಹಾರಾಜರು ಮತ್ತು ಆಸ್ಥಾನ ವಿದ್ವಾಂಸರು ತಲೆಬಾಗಿದರು. ಕೊಚ್ಚಿಯ ಮಹಾರಾಜರು ಶ್ರೀಗಳವರ ತರ್ಕ ಪಾಂಡಿತ್ಯಕ್ಕೆ ಮೆಚ್ಚಿ ವೇದಾಂತದಲ್ಲಿಯೂ ವಾಕ್ಯಾರ್ಥಕ್ಕೆ ಮೊದಲು ಮಾಡಿದರು.

ಅದ್ವೈತ ಮತದ ಆಧಾರಸ್ತಂಭಗಳಾದ ಮಹಾವಾಕ್ಯಗಳಿಗೆಲ್ಲ ದ್ವೈತಪರವಾದ ಅರ್ಥವನ್ನು ಸ್ವಾಮಿಗಳವರು ಮಹಾರಾಜರಿಗೂ ಮಹಾಪಂಡಿತರಿಗೂ ಒಪ್ಪಿಗೆಯಾಗುವಂತೆ ಹೇಳಿದರು. ಶ್ರೀಗಳವರ ಪಾಂಡಿತ್ಯ, ವಾದಕೌಶಲ್ಯ, ಸೌಜನ್ಯ ವಿನಯ ಬಂಧುರವಾದ ವಾಕ್ಸರಣಿಯನ್ನು ಕಂಡು ವಿದ್ಯಾಪಕ್ಷಪಾತಿಗಳಾದ ಮಹಾರಾಜರು ಶ್ರೀಗಳವರನ್ನು ಅಭಿನಂದಿಸಿದ್ದು ಮಾತ್ರವಲ್ಲದೇ ಎಲ್ಲ ಪಂಡಿತರೊಡನೆ ನಮ್ರತೆಯಿಂದ ಅಭಿನಂದಿಸಿದರು. ಅರಮನೆಯಲ್ಲಿ ಶ್ರೀಗಳವರ ಭಿಕ್ಷೆ ಮಾಡಿಸಿ ಅವರ ಕುಟುಂಬದವರೆಲ್ಲರೂ ಆಶೀರ್ವಾದ ಪಡೆದರು. ಮಹಾರಾಜರ ಅರಮನೆಯಲ್ಲಿ ಅನೇಕ ಹೆಂಗಳೆಯರು ಸಂಸ್ಕೃತ ಪ್ರವೀಣರು ಶಾಸ್ತ್ರಪಂಡಿತರೂ ಇದ್ದರು. ಅರಮನೆಯ ಓರ್ವ ವೃದ್ಧ ವಿದುಷಿಮಣಿಯು ಭಾಗವತದ ವಿಜಯಧ್ವಜೀಯ ವ್ಯಾಖ್ಯಾನದಲ್ಲಿ ಒಂದು ಪ್ರಶ್ನೆ ಕೇಳಿದಳು. ಶ್ರೀಗಳವರು ನಸುನಗುತ್ತ ವಿಜಯದ್ವಜೀಯ ವ್ಯಾಖ್ಯಾನದ ಆ ಕಠಿಣ ಪಂಕ್ತಿಗಳನ್ನು ವಿವರಿಸಿ ಅದರ ಸ್ವಾರಸ್ಯ ಮತ್ತು ಅರ್ಥ ರಹಸ್ಯವನ್ನು ತಿಳಿಸಿ ಹೇಳಿದಾಗ ವಿದ್ವಾಂಸರೂ ವಿದುಷಿ ವನಿತಾ ವೃಂದದವರೆಲ್ಲರೂ ಅತ್ಯಂತ ಸಂತೋಷಪಟ್ಟು ಶ್ರೀಗಳವರಿಗೆ ಮಹಾರಾಜರ ಸಮಕ್ಷಮದಲ್ಲಿಯೇ ಭಕ್ತಿ ಕಾಣಿಕೆ ಇತ್ತು ನಮಿಸಿದರು.

## ಪುಣೆಯ ದಿಗ್ವಿಜಯ

ಆ ಕಾಲದಲ್ಲಿ ಮಹಾರಾಷ್ಟ್ರದ ರಾಜಧಾನಿಯಂತಿದ್ದ ಪುಣೆ ಪಟ್ಟಣದಲ್ಲಿ ಒಂದು ವಿದ್ವದ್‌ಗೋಷ್ಠಿ ನಡೆಯಿತು. ಪುಣೆ ವಿಶ್ವವಿದ್ಯಾಲಯದ ಉಪಕುಲಪತಿ ಮಹಾಮಹೋಪಾಧ್ಯಾಯ ದತ್ತೋ ವಾಮನ ವೋದ್ದಾರ, ಅಭ್ಯಂಕರ ಶಾಸ್ತ್ರಿ, ಪಾಟಣಕರ ಶಾಸ್ತ್ರಿ, ಶೇಂಡೆ, ರಾನಡೆ, ರಂಜವಡೇಕರ ಮುಂತಾದ ಪಂಡಿತರೆಲ್ಲರೂ ಅಹಮಹಮಿಕೆಯಿಂದ ಸಭೆಯಲ್ಲಿ ಭಾಗವಹಿಸಿದ್ದರು. ''ಘಟೋ ಘಟಃ'' ಎಂಬುವ ವಾಕ್ಯದಿಂದ ಶಾಬ್ದಬೋಧ ಹುಟ್ಟುವುದಿಲ್ಲ ಅದಕ್ಕೆ ಏನು ಕಾರಣ ? ಎಂಬ ವಿಚಾರ ಪ್ರಸ್ತುತವಾಯಿತು.

ಇದರ ಮೇಲೆ, ಶ್ರೀಗಳು ಅನಂತರ ಅಲ್ಲಿ ನಡೆದ ಎಲ್ಲ ಶಂಕಾಸಮಾಧಾನಗಳ ಮೇಲೆ ಕೋಟಿಕ್ರಮದ ವಾಗ್ವೈಖರಿಯನ್ನು ಉಪಕ್ರಮಿಸಿ ವಾಕ್ಯಾರ್ಥ ವಿಕ್ರಮವನ್ನೇ ಸಾಧಿಸಿ ಎಲ್ಲರ ವಾಗ್ಬಂಧನ ಮಾಡಿದರು. ಸ್ವಾಮಿಗಳ ಹರಿತ ಬುದ್ಧಿ, ತ್ವರಿತ ಉತ್ತರ ತಕ್ಷಣದಲ್ಲಿ ಸ್ಫುರಿತವಾದ ಪ್ರತ್ಯುತ್ಪನ್ನಮತಿತ್ವಾದಿಗಳನ್ನು ಕಂಡು ಸಂತಸಗೊಂಡು ಆ ಪಂಡಿತ ಮಂಡಲಿಯೆಲ್ಲ ಹಣೆಮಣಿಯಿತು. ಶ್ರೀಗಳವರಿಗೆ ಮಾನಪತ್ರವನ್ನಿತ್ತು ಪುಣೆಯ ನಾಗರಿಕರು ಸನ್ಮಾನ ಸಮಾರಂಭವನ್ನು ಅದ್ದೂರಿಯಿಂದ ನೆರವೇರಿಸಿದರು.

## ದಿಲ್ಲಿಯಲ್ಲಿ ಜಯಭೇರಿ

ದಿಲ್ಲಿಯಲ್ಲಿ ಭಂಡಾರಕೆರೆ ಶ್ರೀಗಳವರ ಜೊತೆ ಕೂಡಿಕೊಂಡು ಕೇಂದ್ರ ಮಂತ್ರಿ ದಾತಾರ ಬಳವಂತ ರಾಯರ ಸಹಾಯದಿಂದ ಲೋಕಕಲ್ಯಾಣಾರ್ಥವಾಗಿ ಐದು ಲಕ್ಷ ರೂ. ಖರ್ಚು ಮಾಡಿ ಯಮುನಾನದಿ ದಂಡೆಯ ಮೇಲೆ ಒಂದು ಮಹಾ ಯಾಗವನ್ನು ಮಾಡಿಸಿದರು. ಅಷ್ಟಗ್ರಹ ಶಾಂತ್ಯರ್ಥವಾಗಿ ಮಾಡಿದ ಆ ವಿಷ್ಣುಯಾಗಕ್ಕೆ ದಕ್ಷಿಣೋತ್ತರ ಪಂಡಿತರೆಲ್ಲರೂ ಬಂದು ಸೇರಿದ್ದರು. ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ವಾಕ್ಯಾರ್ಥ ನಡೆಯಿತು.

ಅದರಲ್ಲಿ ಉತ್ತರದ ಕಾಶಿ, ಕಲಕತ್ತಾ, ನವದ್ವೀಪ, ಬಿಹಾರ ಮುಂತಾದ ನಾನಾಭಾಗಗಳಿಂದ ಬಂದ ಔತ್ತರೇಯ ಪಂಡಿತರೆಲ್ಲರೂ ಒಟ್ಟಾಗಿ ಸೇರಿ ದಾಕ್ಷಿಣಾತ್ಯ ಪಂಡಿತರ ಮೇಲೆ ವಾಕ್ಯಾರ್ಥದ ಧಾಳಿ ಮಾಡಿ ದಂತೆ ಮಾಡಿದರು. ಉತ್ತರ ಹಿಂದುಸ್ಥಾನದಲ್ಲಿ ಮಣಿದೀಧಿತಿಗಳ ಮೇಲಿನ ಮಾಥುರಿ ಜಾಗದೀಶಿ ಕೋಟಿ ಕ್ರಮ ಗ್ರಂಥಗಳು ಪ್ರಚಲಿತವಿರುತ್ತವೆ. ದಕ್ಷಿಣ ಭಾರತದಲ್ಲಿ ಗದಾಧರಿ ಮಾತ್ರ ಪ್ರಚಾರದಲ್ಲಿದೆ. ಗದಾಧರಿ ಯಲ್ಲಿ ವಾಕ್ಯಾರ್ಥ ಮಾಡಿದರೆ ಸ್ವಾಮಿಗಳ ಜೊತೆಗೆ ಬಂದ ದಾಕ್ಷಿಣಾತ್ಯ ಪಂಡಿತರನ್ನು ಹಿಮ್ಮೆಟ್ಟಿಸಲು ಸಾಧ್ಯವಿಲ್ಲವೆಂದು ಬಗೆದು, ಅವರು ಮಾಥುರಿ ಗ್ರಂಥದಲ್ಲಿಯೇ ಪೂರ್ವಪಕ್ಷ ಮಾಡಿದರು. ಅವರಲ್ಲಿ ಮಹಾಮಹೋಪಾಧ್ಯಯ ರಾಜೇಶ್ವರಿ ಶಾಸ್ತ್ರಿಗಳ ಪಟ್ಟ ಶಿಷ್ಯರಾದ ರಾಮಚಂದ್ರ ಶಾಸ್ತ್ರಿ ಷಡಂಗ ಅವರು ಮಾಥುರಿ ಪಂಚಲಕ್ಷಣಿಯಲ್ಲಿ ಅಸ್ಖಲಿತವಾದ ವಾಕ್‌ಶೈಲಿಯಲ್ಲಿ ಕೋಟಿ ಏರಿಸಿದರು. ಆ ಪೂರ್ವಪಕ್ಷಕ್ಕೆ ಯಾರಿಗೂ ಸಮಂಜಸವಾಗಿ ಉತ್ತರ ನೀಡಲಿಕ್ಕೆ ಆಗಲಿಲ್ಲ. ಶಾಸ್ತ್ರಿಗಳು ನಿರ್ವೀರಮುರ್ವೀತಲಂ ಎನ್ನುವ ಭಾವದಿಂದ ಸಾಹಂಕಾರ ಹುಂಕಾರವನ್ನು ಧ್ವನಿತಗೊಳಿಸಿ ಪಂಡಿತ ಮಂಡಲಿಯ ಕಡೆಗೆ ನೋಡಹತ್ತಿದರು. ಆಗ ಪೇಜಾವರ ಸ್ವಾಮಿಗಳವರು ತಮ್ಮ ನವನವೋನ್ಮೇಷಶಾಲಿಯಾದ ಪ್ರತಿಭೆಯಿಂದ ಶಾಸ್ತ್ರಿಗಳವರ ಪೂರ್ವಪಕ್ಷಕ್ಕೆ ಸಮಂಜಸವಾಗಿ ಉತ್ತರ ಕೊಟ್ಟರು. ಘಟಭಿನ್ನಂ ತಾದಾತ್ಮೇನ ಘಟತ್ವಾತ್ ಎನ್ನುವಲ್ಲಿ ಬಂದ ಅವ್ಯಾಪ್ತಿಯ ಪರಿಹಾರಕ್ಕಾಗಿ ಪ್ರತಿಯೋಗಿತೆಯಲ್ಲಿ ತಾದಾತ್ಮ್ಯ ಸಂಬಂಧಾನವಚ್ಛಿನ್ನತ್ವವನ್ನು ಮಥುರಾನಾಥರು ನಿವೇಶನ ಮಾಡಿದ್ದಾರೆ. ಇದು ಕಾರಣವಿಲ್ಲ. ಪ್ರತಿಯೋಗಿತೆಯಲ್ಲಿ ಸ್ವನಿಷ್ಠತ್ವ ನಿವೇಶನದಿಂದಲೇ ಅವ್ಯಾಪ್ತಿ ಪರಿಹಾರವಾಗುತ್ತದೆ. ಗ್ರಂಥಕಾರ ಈ ದ್ರಾವಿಡ ಪ್ರಾಣಾಯಾಮ ಏಕೆ ಮಾಡಿದ? ಈ ಪೂರ್ವಪಕ್ಷ ಎಲ್ಲ ಪಂಡಿತರಿಗೂ ಅನುತ್ತರಣೀಯವೂ ಅನುದ್ಧರಣೀಯವೂ ಆಗಿ ಕುಳಿತ್ತಿತ್ತು. ಆಗ ಶ್ರೀಗಳವರೂ ಕಿಂಚಿತ್ ಸಮಯ ವಿಚಾರ ಮಾಡಿ "ಸ್ವನಿಷ್ಠತ್ವ ನಿವೇಶನ ಮಾಡಿದರೂ ಅವ್ಯಾಪ್ತಿ ಪರಿಹಾರವಾಗುವುದಿಲ್ಲ ಎಂಬುದನ್ನು ಉಪಪಾದಿಸಿ ತಾದಾತ್ಮ್ಯ ಸಂಬಂಧ ಅನವಚ್ಛಿನ್ನತ್ವವನ್ನು ಪ್ರತಿಯೋಗಿತೆಯಲ್ಲಿ ನಿವೇಶ ಮಾಡದೇ ಅವ್ಯಾಪ್ತಿ ಪರಿಹಾರವು ಅಶಕ್ಯವಾಗಿದೆ. ಆದುದರಿಂದ ಮಥುರಾನಾಥರು ಹಾಗೆ ತಾದಾತ್ಮ್ಯ ಸಂಬಂಧ ಅನವಚ್ಛಿನ್ನತ್ವವನ್ನು ಸೇರಿಸಿದ್ದು ಸಮಂಜಸವಾಗಿಯೇ ಇದೆ" ಎಂದು ಉತ್ತರ ಹೇಳಿದರು. ಇದನ್ನು ಖಂಡಿಸಲು ಷಡಂಗ ಶಾಸ್ತ್ರಿಗಳು ಅಕಟವಿಕಟ ಪ್ರಯತ್ನಗಳನ್ನೆಲ್ಲ ಮಾಡಿದರು. ಆದರೆ ಪ್ರತಿಭಾವಂತ ಪರಾವರರಾದ ಶ್ರೀಗಳವರು ಅವರ ಯಾವ ವಾಗಾಟೋಪಕ್ಕೂ ಮಣಿಯದೇ ಯಾವ ಉಕ್ತಿ ಯುಕ್ತಿಗಳಿಗೂ ಹಣಿಯದೇ ಮಥುರಾನಾಥರ ವಾಕ್ಯವು ಅಖಂಡ್ಯ ಸಮಂಜಸ ಅನಮದ್ಯ ಎಂದು ಖಡಾಖಂಡಿತವಾಗಿ ಸಿದ್ಧಮಾಡಿ ತೋರಿಸಿದರು. ಆಗ ಸ್ವತಃ ಷಡಂಗಶಾಸ್ತ್ರಿಗಳು ಎದ್ದುಬಂದು ಶ್ರೀಗಳವರಿಗೆ ಸಾಷ್ಟಾಂಗ ಪ್ರಣಾಮಮಾಡಿ ಸರ್ವಪೂರ್ವ ಪಕ್ಷಗಳಿಗೂ ಸಮಂಜಸ ಉತ್ತರ ಹೇಳುವ ಶ್ರೀಗಳವರ ಉದರ್ಕ, ತರ್ಕ ಕೌಶಲ್ಯವನ್ನು ಕೊಂಡಾಡಿ ಮತ್ತೊಮ್ಮೆ ಪ್ರಣಾಮ ಮಾಡಿದರು.

## ಕಾಶಿಯಲ್ಲಿ ಕೀರ್ತಿಕಿರೀಟ

ಕಾಶಿ ಎಂದಿನಿಂದಲೂ ಶಾಸ್ತ್ರವಿದ್ಯೆಯ ಆಗರ. ಅಲ್ಲಿ ಇದ್ದ ಪಂಡಿತರೆಲ್ಲರೂ ಒಬ್ಬೊಬ್ಬರೂ

ವಿದ್ಯಾಸಾಗರ. ಸತ್ಯಧ್ಯಾನರ ಅನಂತರ ಆ ವಿದ್ಯಾಕೇಂದ್ರದಲ್ಲಿ ವಿಜಯ ಡಿಂಡಿಮವನ್ನು ಬಾರಿಸಿದ ವಿರಳ ಶ್ರೀಪಾದಂಗಳವರಲ್ಲಿ ಶ್ರೀ ಪೇಜಾವರ ಸ್ವಾಮಿಗಳವರು ಅನ್ಯತಮರು, ಧನ್ಯತಮರು. ಕಾಶಿಯಲ್ಲಿ ಮೂರು ಸಲ ವಿದ್ವದ್ಗೋಷ್ಠಿಗಳನ್ನು ನೆರವೇರಿಸಿ ಅಲ್ಲಿಯ ಎಲ್ಲ ವಿದ್ವದ್ ವೃಂದದಿಂದ ವಂದಿತಾಭಿನಂದಿತರಾದರೂ ಗರುಡನ ಊರಿನಲ್ಲಿ ನಾಗರಪಂಚಮಿ ಮಾಡಿದಂತೆ ಅದ್ವೈತ ಮತದ ಕೇಂದ್ರಬಿಂದುವಿನಂತೆ ಇದ್ದ ಕಾಶಿಯಲ್ಲಿ ಶ್ರೀಗಳವರು ದ್ವೈತ ವಿಜಯದುಂದುಭಿ ದುಂದುಮಿಸುವಂತೆ ಮಾಡಿದರು. ಮಹಾಮಹೋಪಾಧ್ಯಾಯ ರಾಜೇಶ್ವರಶಾಸ್ತ್ರಿ, ದಾತಾರಶಾಸ್ತ್ರಿ, ಹರೇರಾಮ ಶುಕ್ಲ, ಬದರಿನಾಥಶಾಸ್ತ್ರಿ ಮುಂತಾದ ಪಂಡಿತರೆದುರು ಕೃತಿತಾದಾತ್ಮ್ಯರೂಪವಾದ ಕರ್ತೃತ್ವವು ಪ್ರಕೃತಿಯಲ್ಲಿಯೂ ಬರುವುದರಿಂದ ಅದ್ವೈತ ಮತದಲ್ಲಿ ಸಾಂಖ್ಯ ನಿರಾಕರಣೆ ಕೂಡುವದಿಲ್ಲ ಎಂಬುದನ್ನು ಬಲವತ್ತರ ಯುಕ್ತಿಯಿಂದ ಉಪಸ್ಕೃತವಾದ ಉಕ್ತಿಯಿಂದ ಪ್ರತಿಪಾದಿಸಿದ್ಧರು. ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ ಎಂಬಂತೆ ಆ ಎಲ್ಲ ಪಂಡಿತರೂ ವಿನಯಾವತಂಸರಾದ ವಿದ್ವಾಂಸರಾದುದರಿಂದ ಭೂಯಾಂಸಿ ನಮಾಂಸಿ ಎಂದು ಶ್ರೀಗಳವರಿಗೆ ಹಣೆ ಮಣಿದರು. ಅವರ ಪಾಂಡಿತ್ಯವನ್ನು ಮನ್ನಿಸಿದರು, ಪ್ರಣಾಮ ಪತ್ರಗಳನ್ನು ಸಲ್ಲಿಸಿದರು, ಮಾನಪತ್ರವನ್ನು ಅರ್ಪಿಸಿದರು. ಆ ಎಲ್ಲ ಮಾನಪತ್ರ, ಪ್ರಮಾಣಪತ್ರಗಳು, ಜಯಪತ್ರ ಅಪರ ಪರ್ಯಾಯವಾದುವೆಂದರೆ ಅತಿಶಯೋಕ್ತಿ ಎನಿಸುವುದಿಲ್ಲ.

## ಅನಂತಕೃಷ್ಣರ ಖಂಡನೆ–ವಾದಿರಾಜರ ಮಂಡನೆ

ಮಹಾಮಹೋಪಾಧ್ಯಾಯ ಅನಂತಕೃಷ್ಣ ಶಾಸ್ತ್ರಿಗಳು ಅದ್ವೈತಮತದ ಅಧ್ವರ್ಯು ಪಂಡಿತರು, ಉದ್ದಾಮ ವಿದ್ವಾಂಸರು. ಅವರು ಒಮ್ಮೆ ಉಡುಪಿಗೆ ಬಂದಾಗ ವಾದಿರಾಜ ಸ್ವಾಮಿಗಳವರ ಯುಕ್ತಿ ಮಲ್ಲಿಕೆಯ ಮೇಲೆ ಆಕ್ಷೇಪವೆತ್ತುವ ದುಸ್ಸಾಹಸಕ್ಕೆ ಇಳಿದರು. ತಮ್ಮ ಶಂಕರ ಭಗವತ್ಪಾದರು ಎಲ್ಲಿಯೂ ಜೀವೇಶ್ವರರೊಳಗೆ ವಿಶಿಷ್ಟಾ ಭೇದವನ್ನು ಹೇಳಿಲ್ಲವೆಂದು ಸಾಧಿಸಿದರು, ಹಟದಿಂದ ವಾದಿಸಿದರು. ಆಗ ಪೇಜಾವರ ಶ್ರೀಗಳವರು ಅವರಿಗೆ ಶಂಕರ ಭಾಷ್ಯವನ್ನು ತೆರೆದು ತದಭಿಧ್ಯಾನಾದಿಕರಣದಲ್ಲಿ ಜೀವೇಶ್ವರರೊಳಗೆ ವಿಶಿಷ್ಟಾ ಭೇದವನ್ನು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆಂದು ಎತ್ತಿ ತೋರಿಸಿದರು. ಆಗ ಅನಂತಕೃಷ್ಣ ಶಾಸ್ತ್ರಿಗಳು ಉತ್ತರ ಹೇಳಲು ಬಾರದೇ ಮೌನಮುಗ್ಧರಾಗಿ ಎದ್ದುಹೋದರು.

ಅನಂತಕೃಷ್ಣ ಶಾಸ್ತ್ರಿಗಳು ಹೀಗೆ ಪೇಜಾವರ ಶ್ರೀಗಳೊಂದಿಗೆ ಮುಖಭಂಗ ಹೊಂದಿದ್ದರೂ ತಮ್ಮ ಅದ್ವೈತ ತತ್ತ್ವಸುಧಾ ಎಂಬ ಗ್ರಂಥದ ಪೀಠಿಕೆಯಲ್ಲಿ ಸತ್ಯ ಧ್ಯಾನತೀರ್ಥರನ್ನು ಮಹಾವಿದ್ವಾಂಸರೆಂದು ಕೊಂಡಾಡಿ, ಶ್ರೀ ಪೇಜಾವರ ಮಠಾಧೀಶ, ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರೂ ಪಂಡಿತೋತ್ತಮ ಪರಿವ್ರಾಜಕರೆಂದು ಹೊಗಳಿದ್ದಾರೆ. ವಿದ್ವಾಂಸರ ಬೆಲೆಯನ್ನು ನಿಜವಾದ ವಿದ್ವಾಂಸರೇ ಅರಿಯಬೇಕಲ್ಲವೇ !

## ಶೃಂಗೇರಿ ಶ್ರೀಗಳಿಂದ ಸನ್ಮಾನ

ಬೆಂಗಳೂರಿನಲ್ಲಿ ಶೃಂಗೇರಿ ಸಂಸ್ಥಾನದ ಅಧೀಶರರಾದ ಜಗದ್ಗುರು ಶಂಕರಾಚಾರ್ಯರು ಒಂದು ವಿದ್ವತ್ ಸಭೆ ನಡೆಸಿ ಶ್ರೀ ಪೇಜಾವರ ಶ್ರೀಗಳವರನ್ನು ಬರಮಾಡಿಕೊಂಡಿದ್ದರು. ಆಗ ಅದ್ವೈತಮತದ ಉದ್ದಾಮ ವಿದ್ವಾಂಸರೆಲ್ಲ ನೆರೆದಿದ್ದರು. ''ಅಂತಸ್ತದ್ಧರ್ಮೋಪ ದೇಶಾತ್'' ಎಂಬ ಬ್ರಹ್ಮಸೂತ್ರದ ಅಧಿಕರಣದ ಮೇಲೆ ವಾಕ್ಯಾರ್ಥ ವಿಚಾರ ನಡೆಯಿತು. ಆಗ ಅದ್ವೈತ ಪಂಡಿತರು ಮಾಡಿದ ಆಕ್ಷೇಪಗಳಿಗೆಲ್ಲ ಶ್ರೀಗಳವರು ಪ್ರಮಾಣ ವಚನ ಉದಾಹರಣ ಪೂರ್ವಕವಾಗಿ ಉಕ್ತಿಯುಕ್ತಿಗಳಿಂದ ಅವರ ವಾದಗಳನ್ನು ಖಂಡಿಸಿ ದ್ವೈತಸಿದ್ಧಾಂತವನ್ನು ಮಂಡಿಸಿದರು. ಶೃಂಗೇರಿಯ ಜಗದ್ಗುರುಗಳು ಶ್ರೀಗಳವರ ಪ್ರಚಂಡ ಪಾಂಡಿತ್ಯಕ್ಕೆ ತಲೆದೂಗಿ ಜರದ ಶಾಲು ಹೊದಿಸಿ ಸಭೆಯಲ್ಲಿಯೇ ಸತ್ಕರಿಸಿದರು.

## ಗ್ರಂಥ ಪ್ರಕಾಶನ-ಪತ್ರಿಕಾ ಪ್ರಕಾಶನ

ಶ್ರೀ ಶ್ರೀಗಳವರು, ಕೈಗೊಂಡ ಅನೇಕ ಜನಹಿತ ಕಾರ್ಯಗಳಲ್ಲಿ ಗ್ರಂಥ ಪ್ರಕಾಶನವೂ ಒಂದು. ಶ್ರೀಮಧ್ವಾಚಾರ್ಯರರು ತಮ್ಮ ಜೀವನದಲ್ಲಿ ೩೭ ಗ್ರಂಥಗಳನ್ನು ಬರೆದು ಶಾಸ್ತ್ರ ಪ್ರಪಂಚದ ಸೀಮಾ ಪುರುಷರೆನಿಸಿದ್ದಾರೆ. ಆ ಆಚಾರ್ಯರ ಗ್ರಂಥಗಳ ಒಟ್ಟಂದಕ್ಕೆ ''ಸರ್ವಮೂಲ'' ಎಂದು ಹೆಸರು. ಅದೇನೋ ಹಿಂದೆ ಒಂದು ಸಲ ಮುದ್ರಿತವಾಗಿತ್ತು. ಶ್ರೀಮಧ್ವಾಚಾರ್ಯರು ತಮ್ಮ ಸಾಕ್ಷಾತ್ ಶಿಷ್ಯರಾದ ಪಲಿಮಾರು ಮಠದ ಮೂಲ ಪುರುಷರಾದ ಹೃಷಿಕೇಶತೀರ್ಥರಿಗೆ ಪ್ರೀತಿಯಿಂದ ಪಾಠ ಹೇಳಿದ್ದರು. ಆಚಾರ್ಯರ ಕಾಲದಲ್ಲಿಯೇ ಅವರ ಅಚ್ಚುಮೆಚ್ಚಿನ ಶಿಷ್ಯರೆಂದು ಪ್ರಸಿದ್ಧರಾದ ಆ ಹೃಷಿಕೇಶತೀರ್ಥರು ಆಚಾರ್ಯರಿಂದ ಅವರ ೩೭ ಗ್ರಂಥಗಳ ಪಾಠವನ್ನು ಸಾಕ್ಷಾತ್ ಆಗಿ ಕೇಳಿ ಅವರ ಕಂಠೋಕ್ತವಾಗಿ ಅಕ್ಷರಶಃ ಹೇಳಿದ್ದನ್ನು ತಮ್ಮ ಹಸ್ತಾಕ್ಷರದಲ್ಲಿ ಬರೆದು ಇಟ್ಟಿದ್ದರು. ಅಪರೂಪವಾದ ಸರ್ವಮೂಲ ಪುಸ್ತಕವು ಪಲಿಮಾರು ಮಠದ ತಾಡವಾಲೆ ಗ್ರಂಥರೂಪದಲ್ಲಿ ಇದ್ದಿತು. ಪ್ರತಿದಿನವೂ ಸ್ವಾಮಿಗಳವರು ಪೀಠ ಪರಂಪರೆಯಿಂದ ಅಚ್ಚು ಕಟ್ಟಾದ ಪೆಟ್ಟಿಗೆಯಲ್ಲಿಟ್ಟು ಪೂಜೆ ಮಾಡುತ್ತಿದ್ದರು, ಅದು ಮುದ್ರಣ ಮುಖವನ್ನೇ ಕಂಡಿರಲಿಲ್ಲ. ಪೇಜಾವರ ಶ್ರೀಗಳವರು ಪ್ರಯತ್ನ ಮಾಡಿ ಭಂಡಾರಕೆರೆ ಶ್ರೀಪಾದಂಗಳವರ ಸಹಾಯದಿಂದ ಹಾಗೂ ಗದುಗಿನ ಕೆ. ನಾರಾಯಣರಾಯರ ಆರ್ಥಿಕ ನೆರವಿನಿಂದ ಹೃಷಿಕೇಶತೀರ್ಥೀಯ ಪಾಠಾಂತರವನ್ನು ಪ್ರಪ್ರಥಮವಾಗಿ ಉಡುಪಿಯಲ್ಲಿ ಪ್ರಕಾಶನ ಪಡಿಸಿದರು. ಹಾಗೂ ಆಚಾರ್ಯರ ದಶಪ್ರಕರಣಗಳೆಂದು ಪ್ರಸಿದ್ಧವಾದ ಹತ್ತು ಮುತ್ತಿನಂತಹ ಗ್ರಂಥಗಳನ್ನು ಬೇರೆ ಬೇರೆ ವ್ಯಾಖ್ಯಾನ ವಿವರಣೆಗಳೊಂದಿಗೆ ಪ್ರಕಾಶನ ಪಡಿಸಿದರು.

## ಮಾಧ್ವರ ಏಳುನೂರು ವರ್ಷದ ಇತಿಹಾಸ

'ಮಾಧ್ವ ವಾಙ್ಮಯ ತಪಸ್ವಿಗಳು' ಎಂಬ ಗ್ರಂಥವನ್ನು ಪಂ. ಗಲಗಲಿ ಪಂಢರಿನಾಥಾಚಾರ್ಯರಿಂದ ಬರೆಯಿಸಿ ನಾರಾಯಣರಾಯರು ನೀಡಿದ ಆರ್ಥಿಕ ಸಹಾಯದಿಂದ ಮುದ್ರಿಸಿ ಪ್ರಕಟಿಸಿದರು. ಅದರಲ್ಲಿ ಶ್ರೀಮಧ್ವಾಚಾರ್ಯರಿಂದ ಆರಂಭಿಸಿ ಇಂದಿನ ವರೆಗೆ ಮಧ್ವಮತವು ನಡೆದು ಬಂದ ದಾರಿಯನ್ನು ವಿವರವಾಗಿ ವಿಶ್ಲೇಷಿಸಲಾಗಿದ್ದಿತು. ಆಚಾರ್ಯರು ಅವರ ಸಾಕ್ಷಾತ್ ಶಿಷ್ಯರು ಅವರೆಲ್ಲರ ಪೀಠ ಪರಂಪರೆಗಳು ಮಧ್ವಮತದ ಪ್ರಸಿದ್ಧ ಪೀಠಾಧಿಪತಿಗಳು ಗ್ರಹಸ್ಥ ಗ್ರಂಥಕಾರರು ಟೀಕಾ ಟಿಪ್ಪಣಿಗಳನ್ನು ಬರೆದ ಯತಿ-ತತಿ-ಪತಿಗಳು, ವ್ಯಾಸಕೂಟದ ಧುರಂಧರರು, ದಾಸಕೂಟದ ಧುರೀಣರು, ಪ್ರಾಚೀನ ಕಾಲದಲ್ಲಿ ವಿದ್ಯೋತಮಾನ ವಿದ್ವಾಂಸರು ಈಗಿನ ವಿದ್ಯಮಾನ ಪಂಡಿತರು, ಎಲ್ಲರ ಸಾಗ್ರಸಮಗ್ರವಾದ ಬದುಕು ಬರಹಗಳನ್ನು ಮೊಟ್ಟ ಮೊದಲನೆಯದಾಗಿ ಈ ಹೆಬ್ಬೊತ್ತಿಗೆಯ ಮೂಲಕ ದಾಖಲಿಸಲಾಯಿತು.

## ಮಧ್ವರ ಮೂಲ ಗ್ರಂಥ ಕನ್ನಡಕ್ಕೆ

ಈಗ ಸ್ವಾಮಿಗಳವರು ಒಂದು ಹಿಮಾಲಯದಂತಹ ಮಹತ್ತ್ವದ್ದಾದ ಕಾರ್ಯ ಕೈಗೊಂಡಿದ್ದಾರೆ. ಮಧ್ವಾಚಾರ್ಯರ ಗ್ರಂಥಗಳೆಲ್ಲವೂ ಕಬ್ಬಿಣದ ಕಡಲೆಯಂತಿದ್ದ ಸಂಸ್ಕೃತದಲ್ಲಿ ಶಾಸ್ತ್ರೀಯ ಪರಿಭಾಷೆಯಲ್ಲಿ ಇದ್ದುದರಿಂದ ಶ್ರೀಸಾಮಾನ್ಯರಿಗೆ ಅಗಮ್ಯವಾಗಿದೆ. ಅಸರ್ವಜ್ಞ ದುರ್ಜ್ಞೇಯವಾಗಿವೆ. ಆನಂದತೀರ್ಥ ಭಗವತ್ಪಾದರ ಸೈದ್ಧಾಂತಿಕ ತತ್ತ್ವಗಳು ಮನೆ ಮನೆಗೆ ಮುಟ್ಟಬೇಕು, ಮನ ಮನಕೆ ತಟ್ಟಬೇಕು ಎಂಬ ಹಿರಿಯ ಆಸೆಯಿಂದ ಶ್ರೀಗಳು ಆ ಎಲ್ಲ ಸಮಗ್ರ ೩೭ ಗ್ರಂಥಗಳ ಕನ್ನಡ ಅನುವಾದ ಕಾರ್ಯ ಪ್ರಾರಂಭಿಸಿದ್ದಾರೆ. ತಮ್ಮಲ್ಲಿ ಓದಿ ಪಂಡಿತರಾದ ಹಾಗೂ ಹೊರಗಿನ ಪಂಡಿತರ ಪಂಡಿತ ಪ್ರಕಾಂಡರ ಒಂದು ಮಹಾಮಂಡಲವನ್ನು ನಿಯಮಿಸಿ ಅವರಿಂದ ಸರಳಗನ್ನಡದಲ್ಲಿ ಗ್ರಂಥಮಾಲೆಯ ರೂಪದಿಂದ ಆ ಭಾಷಾಂತರದ ಹೆಬ್ಬೊತ್ತಿಗೆಗಳನ್ನು ಪ್ರಕಟಿಸುತ್ತಲಿದ್ದಾರೆ. ಇದಲ್ಲದೇ ಇನ್ನೂ ಅನೇಕಾನೇಕ ಉಪಯುಕ್ತ

ಗ್ರಂಥಗಳನ್ನು ಆಗಾಗ ಮಾಧ್ವ ಮಹಾಮಂಡಳದ ವತಿಯಿಂದ ಪ್ರಕಾಶ ಪಡಿಸುತ್ತಲೇ ಇದ್ದಾರೆ. ಸ್ವಯಂ ತಾವು ಹುಬ್ಬಳ್ಳಿಯಲ್ಲಿ ಚಾತುರ್ಮಾಸ್ಯ ಕಾಲದಲ್ಲಿ ನಡೆಸಿಕೊಟ್ಟ ಗೀತೆಯ ಮೇಲಿನ ಉಪನ್ಯಾಸಗಳನ್ನು ಸುಂದರವಾದ ಸುಲಲಿತ ಕನ್ನಡದಲ್ಲಿ ಬರೆದು ''ಗೀತಾ ಸಾರೋದ್ಧಾರ'' ಎಂಬ ಸದ್ಗ್ರಂಥವನ್ನು ಯು. ರಾಮಚಂದ್ರ ಭಟ್ಟರ ಆರ್ಥಿಕ ಸಹಾಯದಿಂದ ಪ್ರಕಟಪಡಿಸಿದ್ದಾರೆ. ಜನರ ಆಚಾರ ವಿಚಾರಗಳನ್ನು ತಿದ್ದಿ ತೀಡಿ, ವೈದಿಕ ವೈಷ್ಣವ ತತ್ತ್ವದ ತಿಳುವಳಿಕೆಯನ್ನು ಜನಸಾಮಾನ್ಯರಲ್ಲಿ ಮೂಡಿಸುವ ಉದ್ದೇಶದಿಂದ ಹಲವಾರು ಗ್ರಂಥಗಳನ್ನು ಚಿಕ್ಕ ಪುಸ್ತಿಕೆಗಳನ್ನು ಬರೆದು, ಬರೆಯಿಸಿ ಪ್ರಕಟಿಸುತ್ತಲಿದ್ದಾರೆ.

## ಪತ್ರಿಕಾ ಪ್ರಪಂಚಕ್ಕೆ ಗಣನೀಯ ಕೊಡುಗೆ

ಮಾಧ್ವ ಮಹಾಮಂಡಳದ ಧ್ಯೇಯ ಧೋರಣೆಗಳನ್ನು ಎಲ್ಲ ಆಸ್ತಿಕರಿಗೂ ತಿಳಿಸಿ ಮಧ್ವ ಸಿದ್ಧಾಂತದ ಪದ್ಧತಿ ಪ್ರಮೇಯ ಪ್ರಮಾಣಗಳನ್ನು ಪ್ರತಿಯೊಬ್ಬ ಮಾಧ್ವನಿಗೂ ತಿಳಿಯಪಡಿಸಲಿಕ್ಕಾಗಿ 'ತತ್ತ್ವವಾದ' ಎಂಬ ಪತ್ರಿಕೆಯನ್ನು ಕಳೆದ ೩೫ ವರ್ಷಗಳಿಂದ ನಡೆಸುತ್ತ ಬಂದಿದ್ದಾರೆ. ಅದಕ್ಕೆ ಪಂ. ಪಂಢರಿನಾಥಾಚಾರ್ಯ ಗಲಗಲಿ ಅವರು ಮೂರು ದಶಕಗಳಿಂದಲೂ ಪ್ರಧಾನ ಸಂಪಾದಕರಾಗಿದ್ದು ಆ ಪತ್ರಿಕೆಯನ್ನು ಹಲವಾರು ವರ್ಷ ಗದುಗಿನಿಂದ ಪ್ರಕಟಿಸಲಾಗುತ್ತಿತ್ತು. ಇತ್ತೀಚಿನ ೮-೧೦ ವರ್ಷಗಳಿಂದ ಅದನ್ನು ಬೆಂಗಳೂರಿನಿಂದಲೇ ಪಂ. ಹರಿದಾಸ ಭಟ್ಟರು, ಪಂ. ರಾಮವಿಠ್ಠಲಾಚಾರ್ಯರು, ಡಿ. ಪ್ರಹ್ಲಾದಾಚಾರ್ಯರು ಮುಂತಾದ ವಿದ್ವದಗ್ರೇಸರರ ಸಮರ್ಥ ನೇತೃತ್ವದಲ್ಲಿ ಮಾನನೀಯ ಮನೀಷಿ ಮಂಡಳದ ಮಾರ್ಗದರ್ಶನದಲ್ಲಿ ಪ್ರಟಿಸಲಾಗುತ್ತಿದೆ. ಆ ಪತ್ರಿಕೆಯು ಬ್ರಾಹ್ಮಣರ ಎಲ್ಲ ಪತ್ರಿಕೆಗಳಲ್ಲಿ ಅಧಿಕ ಪ್ರಸಾರವುಳ್ಳ ಮೇಲ್ಮಟ್ಟದ ಸೈದ್ಧಾಂತಿಕ ಪತ್ರಿಕೆಯಾಗಿದ್ದು ಎಲ್ಲ ಮಾಧ್ವರ ಧ್ವನಿಯಾಗಿದೆ.

## ಹರಿಜನ ಸಂಪರ್ಕ

ಪೇಜಾವರ ಸ್ವಾಮಿಗಳ ಜೀವನದಲ್ಲಿ ವಾದ ವಿವಾದದ ಪ್ರಚಂಡ ಬಿರುಗಾಳಿ ಎಬ್ಬಿಸಿದ ಘಟನೆಯೆಂದರೆ ಅವರ ಹರಿಜನೋದ್ಧಾರದ ಕಾರ್ಯಕ್ರಮ. ಶ್ರೀಗಳವರ ದ್ವಿತೀಯ ಪರ್ಯಾಯ ಅದ್ವಿತೀಯವಾಗಿ ಸುಖಾಂತವಾಗಿ ಮಂಗಳಮಯವಾಗಿ ಮುಕ್ತಾಯವಾದ ನಂತರ ಬೆಂಗಳೂರಿಗೆ ಬಂದು ಒಂದು ಕ್ರಾಂತಿಕಾರಕ ಹೆಜ್ಜೆ ಇರಿಸಿದರು. ಹರಿಜನರು ಹಿಂದೂ ಧರ್ಮದ ಒಂದು ಅವಿಭಾಜ್ಯ ಅಂಗ ವಾಗಿದ್ದು ಅನಾದಿಕಾಲದಿಂದ ಹಿಂದೂ ದೇವತೆಗಳನ್ನು ಹಿಂದೂ ಧರ್ಮವನ್ನು ನೆಚ್ಚಿಕೊಂಡು ಬಂದಿದ್ದಾರೆ. ಅವರಲ್ಲಿ ಶೋಷಣೆ ಹಾಗೂ ತುಳಿತಕ್ಕೆ ಒಳಗಾದ ಹಲವಾರು ಕ್ರಿಶ್ಚಿಯನ್ ಹಾಗೂ ಇಸ್ಲಾಮ್ ಧರ್ಮಗಳಿಗೆ ಮತಾಂತರ ಹೊಂದಿದರು. ಅವರನ್ನು ಎಂದೂ ಮುಟ್ಟಿಸಿಕೊಳ್ಳದೇ ಇರುತ್ತಿದ್ದ ಸಂಪ್ರದಾಯವಾದಿಗಳು ಅವರನ್ನು ನಿಸ್ಸಂಕೋಚವಾಗಿ ಮುಟ್ಟಿ ಸವರ್ಣೀಯರಂತೆ ಅವರೊಡನೆ ಆತ್ಮೀಯರಾಗಿ ವ್ಯವಹರಿಸ ತೊಡಗಿದರು. ಇದರಿಂದ ಪ್ರೋತ್ಸಾಹನಗೊಂಡ ಅನೇಕ ಹರಿಜನರು ಮತಾಂತರಕ್ಕೆ ಮುಂದಾದರು. ಇದನ್ನು ಕಂಡು ಕನಲಿಹೋದ ಶ್ರೀಗಳವರು ತಮ್ಮ ಶಾಸ್ತ್ರ ಮರ್ಯಾದೆಯನ್ನು ಮೀರದೇ ಸನಾತನ ಸಂಪ್ರದಾಯದ ಚೌಕಟ್ಟಿನಲ್ಲಿಯೇ ಹರಿಜನರನ್ನು ಉದ್ಧರಿಸಬೇಕೆಂದು ಸಂಕಲ್ಪಿಸಿದರು. ನಮ್ಮ ಹಿಂದೂ ಬಾಂಧವರೇ ಆದ ಅವರನ್ನು ಮತಾಂತರಕ್ಕೆ ನೂಕಿ ಅನಂತರ ಅವರೊಡನೆ ದರ್ಶನ ಸ್ಪರ್ಶನಾದಿ ವ್ಯವಹಾರ ಮಾಡುವುದಕ್ಕಿಂತ ಅವರನ್ನು ನಮ್ಮ ಧರ್ಮದ ಒಕ್ಕೂಟದಲ್ಲಿಯೇ ಉಳಿಸಿಕೊಂಡು ಮ್ಲೇಂಛ ಯವನ ಮೊದಲಾದವರಂತೆ ಸ್ಪಶ್ಯರನ್ನಾಗಿ, ಆತ್ಮೀಯರನ್ನಾಗಿ, ಸೋದರರರನ್ನಾಗಿ ಸಾದರ ಬುದ್ಧಿಯಿಂದ ನೋಡಿಕೊಳ್ಳಬೇಕೆಂದು ಪ್ರತಿಪಾದಿಸತೊಡಗಿದರು. ಇದು ಕೇವಲ ಬಾಯ್ಮಾತಿನ ಪರೋಪದೇಶ ಪಾಂಡಿತ್ಯವಾಗಬಾರದೆಂದು ಸ್ವಯಂ ಬೆಂಗಳೂರಿನಲ್ಲಿಯ ಹರಿಜನ ವಾಸಸ್ಥಾನಗಳಿಗೆ ಹೋಗಿ ಅವರನ್ನು

ಕಂಡು ಅವರ ಸುಖದುಃಖಗಳನ್ನು ಕೇಳಿಕೊಂಡು ಇವರು ನಮ್ಮವರು ಹಿಂದೂ ಬಂಧುಗಳು ಎಂದು ಹೇಳಿ ಅವರು ಎಂದೂ ಹಿಂದೂ ಧರ್ಮದಿಂದ ದೂರಾಗದಂತೆ ಬೋಧಿಸಿ ಬಂದರು.

ಇದಕ್ಕಾಗಿ ಕಟ್ಟಾ ಸನಾತನ ವಾದಿಗಳು ಪ್ರಬಲ ವಿರೋಧ ಮಾಡಿದರೂ ಖಂಡನಮಂಡನ ವಿಚಾರ ವಾದ ವಿವಾದಗಳು ನಡೆದವು. ಶ್ರೀಗಳವರ ನಿರ್ಧಾರ ಅಚಲವಾಗಿದ್ದಿತು. ಸನಾತನ ಧರ್ಮದ ಲಕ್ಷ್ಮಣ ರೇಖೆ ಮೀರದೇ ಸಂಪ್ರದಾಯದ ಯಾವ ಗೋಡೆಯನ್ನೂ ಹಾರದೇ ಹರಿಜನರ ಉದ್ಧಾರ ಸಾಧ್ಯ. ಅದು ಅವಶ್ಯ. ಅದು ಕಾಲದ ಅಗತ್ಯ. ರಾಷ್ಟ್ರದ ಮುಂಬರುವ ಘೋರ ಆಘಾತವನ್ನು ಮುಂಚಿತವಾಗಿ ಮನಗಂಡು ಶ್ರೀಗಳವರು ಹರಿಜನ ಕೇರಿಗೆ ಹೋಗಿ ಅವರಲ್ಲಿ ವಿಶ್ವಾಸ ಮೂಡಿಸಿ ಹಿಂದೂ ಧರ್ಮ ನಿಮ್ಮ ಕೈಬಿಡುವುದಿಲ್ಲ ಎಂಬ ಭರವಸೆ ಹುಟ್ಟಿಸಿದ್ದಾರೆ.

## ದಿಕ್ಕೆಟ್ಟ ದೀನರೆಡೆಗೆ ದಯಾದೃಷ್ಟಿ

ಬಳ್ಳಾರಿ ಜಿಲ್ಲೆಯ ಸಂಗನಕಲ್ಲಿನಲ್ಲಿ ಸವರ್ಣೀಯರಿಂದ ಹರಿಜನರ ಮೇಲೆ ಆಕಸ್ಮಿಕವಾಗಿ ದಾರುಣತರವಾದ ಧಾಳಿಯಾಯಿತು. ಇದರಿಂದ ಕಂಗೆಟ್ಟ ಹರಿಜನರೆಲ್ಲರೂ ದಿಕ್ಕೆಟ್ಟು ತೊಳಲಿ ಬಳಲಿ ಹತಾಶರಾಗಿ ನಿಂತುಕೊಂಡರು. ಆಗ ಶ್ರೀಗಳವರು ನೇರವಾಗಿ ಅಲ್ಲಿಗೆ ಧಾವಿಸಿ ನಿರಾಶ್ರಿತರಾದ ಆ ಹರಿಜನ ಕುಟುಂಬಗಳಿಗೆಲ್ಲ ಆಶ್ರಯ ಕಲ್ಪಿಸಿ ಸಹಾಯ ಸಲ್ಲಿಸಿ ಸಾಂತ್ವನ ನೀಡಿ ಅವರೆಲ್ಲರೂ ಹಿಂದೂ ಧರ್ಮದ ಘಟಕವಾಗಿ ನಿರಂತರವಾಗಿ ಉಳಿಯುವಂತೆ ಮಾಡಿದರು.

## ಮತಾಂತರವಾದವರನ್ನು ಮರಳಿ ತಂದರು

ತಮಿಳುನಾಡಿನ ಮೀನಾಕ್ಷಿಪುರಂನಲ್ಲಿ ೧೯೮೧-೮೨ರಲ್ಲಿ ಉಚ್ಚ ವರ್ಣೀಯರಿಂದ ತುಚ್ಛ ಭಾವನೆಗೆ ಒಳಗಾಗಿರುವ ಹರಿಜನರು ಗುಂಪು ಗುಂಪಾಗಿ ಮುಸಲ್ಮಾನರಾಗಿ ಪರಿವರ್ತನೆಗೊಳ್ಳತೊಡಗಿದರು. ಆಗ ಶ್ರೀಗಳವರು ಅಲ್ಲಿಗೆ ಒಂದೇ ನೆಗೆತಕ್ಕೆ ಹಾರಿಹೋಗಿ ಪ್ರಚಂಡ ಪ್ರಮಾಣದಲ್ಲಿ ನಡೆದ ಆ ಮತಾಂತರವನ್ನು ತಡೆಹಿಡಿದರು. ಈಗಾಗಲೇ ಮುಸಲ್ಮಾನರಾಗಿ ಹೋದ ಅನೇಕ ಹರಿಜನ ಬಾಂಧವರನ್ನು ತಮ್ಮ ಸಮಯ ಪ್ರಜ್ಞೆಯಿಂದ ಹಿಂದೂ ಧರ್ಮಕ್ಕೆ ಪುನಃ ಪ್ರವೇಶ ಮಾಡಿಸಿಕೊಂಡರು. ಮತ್ತು ಅವರೆಲ್ಲರಿಗೂ ಭಕ್ತಿಯ ಸೇವೆ ಪೂಜೆ ಸಲ್ಲಿಸಲು ಒಂದು ದೇವತಾ ಮಂದಿರವನ್ನು ಕಟ್ಟಿಸಿಕೊಟ್ಟರು.

## ಸಂತ ಸಮ್ಮೇಳನ

ಅಖಿಲ ಭಾರತೀಯ ಸಾಧುಸಂತ ಮಹಾಂತರ ಸಮ್ಮೇಳನವು ಹೃದಯಂಗಮವಾದ ತ್ರಿವೇಣಿ ಸಂಗಮ ಕ್ಷೇತ್ರದಲ್ಲಿ ಪ್ರಯಾಗದಲ್ಲಿ ೧೯೮೯ರಲ್ಲಿ ನೆರವೇರಿತು. ಈ ಐತಿಹಾಸಿಕವಾದ ಸಮ್ಮೇಳನದಲ್ಲಿ ಶ್ರೀ ಪೇಜಾವರ ಶ್ರೀಗಳು ಸ್ವಯಂ ಭಾಗವಹಿಸಿ ಸ್ನೇಹಸೂತ್ರದಿಂದ ಸಾಧು-ಸಂತರ ಸಂಘಟನೆ ಸಾಧಿಸಿ ಆ ಸಂತ ಮಹಂತರಿಗೆಲ್ಲ ಮಾರ್ಗದರ್ಶಕ ಮಹರ್ಷಿಗಳಂತೆ ಮಾನನೀಯರಾದರು.

೧೯೯೧ರಲ್ಲಿ ಹರಿದ್ವಾರದ ಗಂಗಾತಟಾಕದಲ್ಲಿ ಸೇರಿದ ಸಾಧು-ಸಂತ ಸಮ್ಮೇಳನದಲ್ಲಿಯೂ ಸ್ವಯಂ ಉಪಸ್ಥಿತರಾಗಿ ಅಮೂಲ್ಯ ಸಲಹೆ ಸೂಚನೆ ಇತ್ತು ಅದರ ಯಶಸ್ಸಿಗೆ ಕಾರಣರಾದರು.

## ಬರಗಾಲ ಪರಿಹಾರ

ಕನ್ನಡದ ಒಬ್ಬ ಕವಿ ''ಪೇಜಾವರ ಶ್ರೀಗಳವರ ಕಮಂಡಲುವಿನಲ್ಲಿ ನೀರು ತುಂಬಿಲ್ಲ, ಕರುಣಾರಸವೇ ತುಂಬಿದೆ'' ಎಂದು ಹಾಡಿ ಹೊಗಳಿದ್ದಾರೆ. ಕಷ್ಟದಲ್ಲಿ ಇರುವವರ ಕಣ್ಣೀರನ್ನು ಒರೆಸಲು

ಅವರ ಕರವಸ್ತ್ರ ಯಾವಾಗಲೂ ಸಿದ್ಧ. ಹಿಂದೆ ಗುಲಬರ್ಗಾ ಜಿಲ್ಲೆಯಲ್ಲಿ ಭೀಕರ ಬರಗಾಲ ಹಲವಾರು ಅಕಾಂಡ ತಾಂಡವ ನಡೆಸಿದಾಗ ಶ್ರೀಗಳವರು ಎಲ್ಲ ಕೆಲಸ ಬಿಟ್ಟು ಧಾವಿಸಿದರು. ಬರಗಾಲದಲ್ಲಿ ಸಂತ್ರಸ್ತರಾಗಿ ಹೊಟ್ಟೆಗಿಲ್ಲದೇ ಬಟ್ಟೆ ಕಾಣದೇ ಕಂಗೆಟ್ಟು ನಿಂತವರಿಗೆಲ್ಲ ೨೦ ಗಂಜಿ ಕೇಂದ್ರಗಳನ್ನು ತೆಗೆದರು. ಅಲ್ಲಿ ಸಾವಿರಾರು ಹಸಿದ ಹೊಟ್ಟೆಗಳಿಗೆ ಸಂತಸದ ಸಂತರ್ಪಣವನ್ನು ನಿರಂತರವಾಗಿ ನಡೆಸಿದರು. ಇದರಂತೆ ದನಕರುಗಳು ಮೇವು ಇಲ್ಲದೇ ಕುಡಿಯಲು ನೀರಿಲ್ಲದೇ ಸಾಮೂಹಿಕವಾಗಿ ಸಾಯತೊಡಗಿದಾಗ ಅದನ್ನು ನೋಡಲಿಕ್ಕೆ ಆಗದೇ ಚಿಂಚೋಳಿಯಲ್ಲಿ ಗೋಕೇಂದ್ರವನ್ನು ತರೆದು ಸಾವಿರಾರು ಹಸುಗಳಿಗೆ ಗೋಗ್ರಾಸ ಒದಗಿಸಿದರು. ಈ ಪರಿಹಾರ ಕಾರ್ಯಗಳಿಗಾಗಿ ಹಣವು ಹೇರಳವಾಗಿ ಹರಿದುಬರಲು ಶ್ರೀಗಳವರು ಗದಗ, ಧಾರವಾಡ, ಮಂಗಳೂರು, ಉಡುಪಿ, ಭದ್ರಾವತಿಗಳಲ್ಲಿ ಪಾದಯಾತ್ರೆ ಕೈಗೊಂಡಿದ್ದರು.

ಇದೇ ರೀತಿಯಾಗಿ ೧೯೮೫ರಲ್ಲಿ ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಭೀಕರ ಬರಗಾಲ ತಲೆದೋರಿದಾಗ ಶ್ರೀಗಳವರು ಬಾಗಲಕೋಟೆಯಲ್ಲಿ ಹಾಗೂ ರೋಣ ತಾಲೂಕಿನ ಕೊಪ್ಪದಲ್ಲಿ ಗೋಕೇಂದ್ರಗಳನ್ನು ಸ್ಥಾಪಿಸಿ ಸಾಯಲಿರುವ ಸಾವಿರಾರು ಪುಣ್ಯಕೋಟಿಗಳನ್ನು ಉಳಿಸಿ ಬೆಳೆಸಿ ಗೋಪಾಲಕೃಷ್ಣನಿಗೆ ತಕ್ಕುದಾದ ಸೇವೆ ಸಲ್ಲಿಸಿದರು.

ಇದೇ ಸಂದರ್ಭದಲ್ಲಿ ಕಾರಡಗಿಯಲ್ಲಿ ನಿರಾಧಾರವಾಗಿ ನಿಟ್ಟುಸಿರು ಬಿಡುತ್ತಿದ್ದ ಶ್ರಮಜೀವಿಗಳಿಗೆ ಕೆರೆಯ ಹೂಳೆತ್ತುವ ಉದ್ಯೋಗ ಕಲ್ಪಿಸಿ ಅಲ್ಲಿ ನಿರಂತರವಾಗಿ ನೀರು ನೆಲೆನಿಂತು ಆ ಕರೆ ತುಂಬಿ ತುಳುಕಾಡುವಂತೆ ಮಾಡಿದರು.

## ಹಂಸಲದೀವಿ

೧೯೭೭ರಲ್ಲಿ ಆಂಧ್ರ ಪ್ರದೇಶದಲ್ಲಿ ಭಯಂಕರವಾದ ಚಂಡಮಾರುತ ಬೀಸಿ ಭೀಕರವಾದ ಅನಾಹುತವೆಸಗಿತು. ಮನೆಮಾರು ಕಳೆದುಕೊಂಡು ಜನಸಾಮಾನ್ಯರೆಲ್ಲ ನಡುನೀರಿನಲ್ಲಿ ನಿಂತುಕೊಂಡಿದ್ದರು. ಅದನ್ನು ಕೇಳಿ ಎಲ್ಲ ರಾಜಕಾರಣಿಗಳಿಗಿಂತ ಮೊದಲು ಕಣ್ಣೀರು ಕರೆದವರು ಶ್ರೀ ಪೇಜಾವರ ಶ್ರೀಗಳು. ಅವರರು ಇದ್ದಲ್ಲಿಂದ ಅಲ್ಲಿಗೆ ಓಡಿದರು. ಆಗ ಝಂಝಾವಾತದ ಹೊಡೆತಕ್ಕೆ ಸಿಕ್ಕು ನಾಮಶೇಷವಾದ ಹಂಸಲದೀವಿ ಗ್ರಾಮವನ್ನು ದತ್ತು ತೆಗೆದುಕೊಂಡು ಒಂಬತ್ತು ಲಕ್ಷ ರೂ. ಖರ್ಚು ಮಾಡಿ ೧೫೦ ಮನೆಗಳನ್ನು ನಿರ್ಮಿಸಿ ನಿರಾಧಾರರಾದವರಿಗೆಲ್ಲ ನೆಲೆಯನ್ನು ಕಲ್ಪಿಸಿಕೊಟ್ಟರು. ಬಟ್ಟ ಬಯಲಿನಲ್ಲಿ ನಟ್ಟ ನೀರಿನಲ್ಲಿ ಮುಗಿಲು ಹೊದೆದು ನಿರಾಶ್ರಿತರಾಗಿ ನಿಂತ ಜನರಿಗೆಲ್ಲ ಒಂದು ವ್ಯವಸ್ಥೆ ಮಾಡಿ ಅವರಿಗೆಲ್ಲ ಆಧಾರ ಕಲ್ಪಿಸಿಕೊಟ್ಟರು.

## ಧೈರ್ಯಶಾಲಿಗಳ ದಿಟ್ಟ ಹೆಜ್ಜೆ

ಕಿರುಮೂರ್ತಿಯಾದ ಬಡಕಲು ಶರೀರದ ಶ್ರೀಗಳು ಮಹಾ ಧೈರ್ಯಶಾಲಿಗಳೆಂಬುದು ಅವರ ಜೀವನದ ಪ್ರತಿ ಹಂತದಲ್ಲಿಯೂ ಪ್ರಕಟವಾಗಿದೆ. ಪಂಜಾಬಿನಲ್ಲಿ ಕೈಗೊಂಡ ಶಾಂತಿಯಾತ್ರೆ ಇದಕ್ಕೆ ನಿದರ್ಶನ. ಬೇಲಿಮಠದ ಸ್ವಾಮಿಗಳು ಹಾಗೂ ಸುಬ್ರಹ್ಮಣ್ಯ ಮಠದ ಶ್ರೀಗಳೂ ಅವರ ಜೊತೆಯಲ್ಲಿದ್ದರು. ಲುಧಿಯಾನಾ, ತರನ್‌ತಾರನ್, ಅಮೃತಸರ ಮುಂತಾದ ಕಡೆಗಳಲ್ಲಿನ ಗುರುದ್ವಾರಗಳನ್ನು, ಸುವರ್ಣ ಮಂದಿರವನ್ನು ಸಂದರ್ಶಿಸಿ ಸಿಖ್ ಪಂಥದ ಸರ್ವೋಚ್ಚ ಗುರುಗಳಾದ ದರ್ಶನಸಿಂಗರಾಗಿ ಅವರಲ್ಲದೇ ಅನೇಕ ಸಂತರನ್ನು ಕಂಡು ಮಾತನಾಡಿದರು.

ಹೆಸರು ಕೇಳಿದರೆ ಉಸಿರು ಕಟ್ಟುವಂತಹ ಅಸುರ ಸದೃಶ ಭಯೋತ್ಪಾದಕರು. ಅವರೊಡನೆ

ಸರಸಸಲ್ಲಾಪ. ವಿರಸಕ್ಕೆ ಅವಕಾಶವಿಲ್ಲ, ಸಮಾಲೋಚನೆ ಭಯವಿಮೋಚನೆಯನ್ನು ಶಾಂತಿ ಸ್ಥಾಪನೆಯ ಚಿಂತೆಯನ್ನು ಅವರ ಅಂತರಂಗಕ್ಕೂ ತಲುಪಿಸುವ ಯತ್ನ. ಭಯನಿವಾರಣೆಯ ಶಾಂತಿಯಾತ್ರೆ ಮನಗೆದ್ದ ಜೈತ್ರಯಾತ್ರೆ. ಅಂತೆಯೇ ಹಂತಹಂತದಲ್ಲಿಯೂ ಅವರಿಗೆ ಸಂತಸದ ಸ್ವಾಗತ ಕಾದಿತ್ತು.

## ತುರ್ತು ಪರಿಸ್ಥಿತಿಗೆ ಪ್ರತಿಭಟನೆ

ತುರ್ತುಸ್ಥಿತಿ ೧೯೭೫ರಲ್ಲಿ ಸಿಡಿಲುಮರಿಯಾಗಿ ನಾಡನ್ನು ಆವರಿಸಿದಾಗ ಶ್ರೀಗಳವರಿಗೆ ಎಲ್ಲೆ ಇಲ್ಲದ ಕಸಿವಿಸಿ. ಪ್ರಧಾನಿ ಇಂದಿರಾ ಗಾಂಧಿಯವರ ಇಂತಹ ಅನಿರೀಕ್ಷಿತ ಪ್ರಹಾರ ರಾಷ್ಟ್ರ ನಾಯಕರಿಗೆ ನೇರವಾಗಿ ತಾಗಿದ್ದರೆ, ಪರ್ಯಾಯವಾಗಿ ಶ್ರೀಗಳವರ ಅಂತರಂಗಕ್ಕೆ ತಾಗಿದ್ದಿತು. ಪ್ರಧಾನಿಯ ಕ್ರಮವನ್ನು ಖಂಡಿಸಿ ಎರಡು ಸಲ ಉಗ್ರ ಪತ್ರಗಳನ್ನು ಬರೆದು ತುರ್ತುಸ್ಥಿತಿಯನ್ನು ತೀವ್ರ ಹಿಂದೆಗೆಯಲು ಆಗ್ರಹಿಸಿದರು. ಮನಸ್ಸು ವ್ಯಗ್ರವಾಗಿದ್ದರೂ ಊರೂರು ಸಂಚರಿಸಿ ಉರಿವ ಸ್ಥಿತಿಯ ಅರಿವು ಮೂಡಿಸಿದರು. ಆ ಮಾತುಗಳನ್ನೇ ಸೈಕ್ಲೊಸ್ಟೈಲನಲ್ಲಿ ಮುದ್ರಿಸಿ ಸದ್ದುಗದ್ದಲವಿಲ್ಲದೇ ದೇಶದ ಮೂಲೆ ಮೂಲೆಗೆ ಮುಟ್ಟಿಸುವ ದಿಟ್ಟ ಆಟ ಹೂಡಿದರು. ಪ್ರತಿಪಕ್ಷದ ನಾಯಕರ ಬಂಧನಸತ್ರದಿಂದ ಶ್ರೀಗಳ ಮನ ಉದ್ವಿಗ್ನವಾಯಿತು. ತುರ್ತುಸ್ಥಿತಿ ಪ್ರತಿಭಟಿಸಿ ಶಾಂತಿಯುತ ಸತ್ಯಾಗ್ರಹಕ್ಕೆ ಮುಂದಾದವರನ್ನು ಅಂತಃಕರಣ ತುಂಬಿ ಆಶೀರ್ವದಿಸಿದರು.

ಸೆರೆಮನೆಯಲ್ಲಿದ್ದ ನಾಯಕರ ದೈಹಿಕ, ಮಾನಸಿಕ ಆರೋಗ್ಯದ ಬಗ್ಗೆ ಅವರಿಗೆ ಎಲ್ಲಿಲ್ಲದ ಚಿಂತೆ. ಕೊನೆಗೊಮ್ಮೆ ಕಾರಾಗ್ರಹ ಪ್ರವೇಶ ಪಡೆದು ಲಾಲಕೃಷ್ಣ ಅದ್ವಾನಿ, ಪ್ರೊ। ಮಧು ದಂಡವಂತೆ ಮುಂತಾದ ಅನೇಕ ಬಂದಿಖಾನೆಯ ಬಂಧುಗಳನ್ನು ಕಂಡರು. ಇದಲ್ಲದೇ ರಾಮಕೃಷ್ಣ ಹೆಗಡೆ. ಎಸ್. ಆರ್. ಬೊಮ್ಮಾಯಿ, ಎಚ್. ಡಿ. ದೇವೇಗೌಡರನ್ನು ಭೆಟ್ಟಿಯಾದಾಗ ಧೃತಿಗೆಡದಂತೆ ಧೈರ್ಯ ಹೇಳಿ ಒಳ್ಳೇ ಕಾಲ ಬರುವ ಭರವಸೆ ಇತ್ತರು. ತುರ್ತುಸ್ಥಿತಿ ವಿರದ್ಧ ಸ್ವಾಮಿಗಳು ನಡೆಸಿದ ಉಪಾಯ ಸರಕಾರದ ಕಣ್ಣು ಕೆಂಪಗಾಗಿಸಿತು. ಇದೇ ರೀತಿ ಮುಂದುವರೆದರೆ ಕಷ್ಟ ಕಾಯ್ದಿದೆ ಎಂಬ ಎಚ್ಚರಿಕೆಯ ಮಾತೂ ಮುಟ್ಟಿತು. ಆದರೆ ಅದಕ್ಕೆ ಶ್ರೀಗಳು ಎದೆಗುಂದಲಿಲ್ಲ. ಪ್ರತಿಯಾಗಿ ಸೆರೆಮನೆ ಸೇರಲು ಸಿದ್ಧ, ಸ್ನಾನ, ದೇವರಪೂಜೆಗೆ ಅವಕಾಶ ಮಾತ್ರ ಸಾಕು ಎಂದು ತಿಳಿಸಿದ್ದರು. ಅವರು ತೋರಿದ ಧೈರ್ಯದಿಂದ ಅವರನ್ನು ಸೆರೆಮನೆಗೆ ಸೇರಿಸುವ ಧೈರ್ಯವನ್ನು ಸರಕಾರ ತೋರಲಿಲ್ಲ.

## ರಾಮಜನ್ಮ ಭೂಮಿ

ಮರ್ಯಾದಾ ಪುರುಷೋತ್ತಮ ಶ್ರೀರಾಮನ ಜನ್ಮಸ್ಥಳ ಅಯೋಧ್ಯೆಯಲ್ಲಿ ರಾಮ ಮಂದಿರ ನಿರ್ಮಾಣ, ಸತತವಾಗಿ ಶ್ರೀರಾಮನ ದರ್ಶನಕ್ಕೆ ಅಮರ್ಯಾದಿತ ಅವಕಾಶವಿರಬೇಕೆಂಬುದಕ್ಕೆ ನಾಂದಿ ಉಡುಪಿ. ೧೯೮೫ರ ಉಡುಪಿ ಸಂತ ಸಮ್ಮೇಳನದಲ್ಲಿ, ಶ್ರೀರಾಮ ಮಂದಿರಕ್ಕೆ ಜಡಿದ ಬೀಗಮುದ್ರೆಯೊಡೆದು ಒಳ ನಡೆಯಬೇಕೆಂಬ ತೀರ್ಮಾನವಾಯಿತು. ಈ ಗಡುಸಿನ ನಿರ್ಣಯ, ಜಾರಿಗೆ ತರುವ ಗಡುವಿನ ಮುನ್ನವೇ ಸರಕಾರ ಸಂತರಿಗೆ ಮಂದಿರದಲ್ಲಿ ಅಡಿ ಇಡಲು ಎಡೆಮಾಡಿಕೊಟ್ಟಿತು. ಆಗ ತಲೆ ಎತ್ತಿದ ರಾಮಜನ್ಮ ಭೂಮಿ ನ್ಯಾಸ ಟ್ರಸ್ಟಿನಲ್ಲಿ ಶ್ರೀಗಳೂ ಒಬ್ಬ ಟ್ರಸ್ಟಿ. ಅಂದಿನಿಂದ ಇಂದಿನ ವರೆಗೆ ಮಂದಿರದ ಆಂದೋಲನದಲ್ಲಿ ಸದಾ ನಿಂದವರಿವರು. ಆಂಧ್ರದ ರಾಜ್ಯಪಾಲರು ೧೯೯೧ರಲ್ಲಿ ಉಡುಪಿಗೆ ಬಂದು ಭೆಟ್ಟಿಯಾದರು. ಅನಂತರ ಪ್ರಧಾನಿ ವಿ. ಪಿ. ಸಿಂಗ್ ಬೆಂಗಳೂರಿಗೆ ವಿಶೇಷ ವಿಮಾನ ಕಳಿಸಿ ಆಂಧ್ರದ ರಾಜ್ಯಪಾಲರ ಜೊತೆಗೆ ದಿಲ್ಲಿಗೆ ಬರಮಾಡಿಕೊಂಡು ಸಂತ ಸಮಾವೇಶ ನಡೆಸಿ ರಾಮಮಂದಿರದ ಮಾರ್ಗೋಪಾಯದ ಬಗ್ಗೆ ಚಿಂತನೆ ನಡೆಸಿದರು. ಇಂತಹ ಯತ್ನ ಹಲವಾರು. ಸಮಸ್ಯೆಯ ಪರಿಹಾರಕ್ಕೆ

ಹಿಂದೂ-ಮುಸ್ಲಿಮ್ ಸಂತರ ಸಭೆಗಳು ಎರಡು ಬಾರಿ ನಡೆದವು.

ರಾಮ ಮಂದಿರ ನಿರ್ಮಾಣದ ಕರಸೇವೆಯಲ್ಲಿ ಇವರು ಮುಂದು. ಶ್ರೀಗಳು ಏಳು ಜನ ಸ್ವಾಮಿಗಳ ಜೊತೆ ಸಾಗಿದಾಗ ೧೯೯೧ರಲ್ಲಿ ಉತ್ತರ ಪ್ರದೇಶದ ಗಡಿಯಲ್ಲಿ ಬಂಧನ. ಫರೂಕಾಬಾದನಲ್ಲಿ ಸ್ಥಾನಬದ್ಧತೆ. ನಿತ್ಯ ಸಾವಿರಾರು ಜನರು ದರ್ಶನಕ್ಕೆ ಧಾವಿಸುತ್ತಿದ್ದರು.

ದಿನಕಳೆದಂತೆ ರಾಮ ಮಂದಿರ ನಿರ್ಮಾಣ ನಿರ್ಣಾಯಕ ಹಂತ ತಲುಪತೊಡಗಿತು. ಜನರ ಸಹನೆ ಕಟ್ಟು ಒಡೆಯುವ ಸಂದರ್ಭದಲ್ಲೆಲ್ಲ ಶ್ರೀಗಳವರದು ಮಧ್ಯಮಾರ್ಗದ ಅನುಸರಣೆ. ಉಗ್ರಭಾವ ನಿಗ್ರಹಿಸಲು ಸತತ ಯತ್ನ, ಅದೇ ಕಾಲಕ್ಕೆ ಗುರಿ ತಲುಪುವ ಆತುರ, ಸರಕಾರಕ್ಕೆ ಕಾತರ. ೧೯೯೨ ಜೂನ್‌ಲ್ಲಿ ಪ್ರಧಾನಿ ಪಿ. ವಿ. ನರಸಿಂಹರಾಯರಿಗೆ ಶ್ರೀಗಳವರನ್ನು ಕಂಡು ಮಾತನಾಡುವ ಬಯಕೆ. ಹರಿದ್ವಾರದಿಂದ ಹೆಲಿಕಾಪ್ಟರಿನಲ್ಲಿ ಶ್ರೀಗಳವರನ್ನು ದಿಲ್ಲಿಗೆ ಬರಮಾಡಿಕೊಂಡರು. ಅವರ ಯತ್ನದ ಫಲವಾಗಿ ಸಾಧು-ಸಂತರ ಬೃಹತ್ ಸಭೆ, ಪರಸ್ಪರ ಸಮಾಲೋಚನೆ. ಪರಿಣಾಮ ಯೋಜಿತ ಕರಸೇವೆಗೆ ಮೂರು ತಿಂಗಳ ಅರ್ಧ ವಿರಾಮ. ಏನೆಂದರೂ ಇದು ಅರ್ಧ ವಿರಾಮ; ರಾಮ ಮಂದಿರ ಕಟ್ಟಿದಾಗಲೇ ವಿರಾಮ. ಡಿಸೆಂಬರ್ ಆರು, ಶ್ರೀರಾಮ ಜನ್ಮಭೂಮಿ ಘಟನೆ ಒಂದು ಮೇರು. ಕರಸೇವೆ ಪರಾಕಾಷ್ಠೆ ತಲುಪಿತು. ಪರಿಸ್ಥಿತಿ ಕೈಮೀರಿತು. ಕೊನೆಯ ವರೆಗೂ ಶ್ರೀಗಳ ಯತ್ನ ಸಾಗಿತ್ತು.

ಅಯೋಧ್ಯೆಯಲ್ಲಿ ಶ್ರೀರಾಮ ಮಂದಿರವನ್ನು ಸರ್ವಾನಂದಕರವಾಗಿ ಕಟ್ಟುವಂತಾಗಬೇಕೆಂಬುದೇ ಅವರ ಕಳಕಳಿ, ಇಂದಿಗೂ ಆ ದಿಸೆಯಲ್ಲಿ ಮುಂದು.

## ಶಿಖರ ಸಾಧನೆ

ಆರ್ತರಿಗೆ ಆಶ್ರಯ, ರುಗ್ಣರಿಗೆ ಚಿಕಿತ್ಸಾಲಯ ಮತ್ತು ವಿದ್ಯಾರ್ಥಿಗಳಿಗೆ ವಿದ್ಯಾಲಯ. ಇಂತಹ ಮುಪ್ಪುರಿಯ ವಿಧಾಯಕ ಮಾರ್ಗ ಶ್ರೀಗಳವರು ರೂಪಿಸಿದ್ದು, ಇಂತಹ ಒಂದೊಂದು ಸಾಧನೆಗೂ ಜನಸಂಗ್ರಹ, ಧನಸಂಗ್ರಹಕ್ಕಾಗಿ ಪಾದಯಾತ್ರೆ. ಬೆಂಗಳೂರು ಜಯನಗರದಲ್ಲಿ ''ಕೃಷ್ಣಸೇವಾಶ್ರಮ'' ಸುಸಜ್ಜಿತ ವೈದ್ಯಕೀಯ ಕೇಂದ್ರ. ೩೦೦ ಹಾಸಿಗೆಯ ದೊಡ್ಡ ಆಸ್ಪತ್ರೆ. ಮಲೆನಾಡು ಕೊಡಗಿನ ಮಡಿಕೇರಿಯಲ್ಲಿ ''ಅಶ್ವಿನಿ'' ಬೃಹತ್ ಆಸ್ಪತ್ರೆ ೩೦೦ ಹಾಸಿಗೆಯನ್ನು ಹೊಂದಿದೆ. ಇದಕ್ಕಾಗಿ ಕೊಡಗಿನುದ್ದಕ್ಕೂ ನಡೆದಾಡಿ ದುಡ್ಡು ಕೂಡಿಸಿದರು. ಅನಾಥರಿಗೆ ನಾಥನಾದ ಶ್ರೀಕೃಷ್ಣ ನೆಲೆನಿಂತ ಉಡುಪಿಯಲ್ಲಿ ಅನಾಥ ಮಕ್ಕಳಿಗಾಗಿ ''ಬಾಲನಿಕೇತನ'' ಅದು ಶ್ರೀಗಳ ಕೊಡಗೂಸು. ಹಲವಾರು ಮಕ್ಕಳ ಲಾಲನೆ ಪೋಷಣೆಯಲ್ಲದೇ ಭವಿಷ್ಯದ ನಿರೂಪಣೆಯೂ ನಡೆಯುತ್ತಿದೆ. ಬೆಂಗಳೂರಿನ ಮಲ್ಲೇಶ್ವರಮ್‌ನಲ್ಲಿ ದಾನಿಗಳೊಬ್ಬರು ನೀಡಿದ ಕಟ್ಟಡ ಚಿಕ್ಕ ಮಕ್ಕಳಿಗೆ ಉಚಿತವಾಗಿ ಚಿಕಿತ್ಸೆ ನೀಡುವ ಕೇಂದ್ರ, ಇಂದಿರಮ್ಮ ಚಾರಿಟೆಬಲ್ ಡಿಸ್ಪೆನ್ಸರಿ, ವರದಾ ತೀರದ ಕರ್ಜಗಿಯಲ್ಲಿನ ವೃದ್ಧಾಶ್ರಮ, ಬಾಳಿನ ಸಂಜೆಯಲ್ಲಿರುವ ಹಿರಿಯರ ಶಾಂತಿಧಾಮ.

ಉಡುಪಿಯ ಬಳಿಯ ಪಾಜಕ ಕ್ಷೇತ್ರದಲ್ಲಿನ ವಾಸುದೇವ ಗುರುಕುಲ ಶ್ರೀಗಳಿಂದ ಪೋಷಿತ ಸಂಸ್ಥೆ. ತಮ್ಮ ಜನ್ಮಸ್ಥಳವಾದ ರಾಮಕುಂಜದಲ್ಲಿ ಹೈಸ್ಕೂಲು, ಜ್ಯೂನಿಯರ್ ಕಾಲೇಜ, ಹೈಯರ್ ಎಲಿಮಂಟರಿ ಶಾಲೆ ನಿರ್ಮಾಣ. ಬೆಂಗಳೂರಿನ ಗಿರಿನಗರ ಬಡಾವಣೆ, ಮೈಸೂರು, ಚಿಕ್ಕಮಗಳೂರಿನಲ್ಲಿ ಒಂದೊಂದಕ್ಕೂ ೧೦ ಲಕ್ಷ ರೂ. ವೆಚ್ಚ ಮಾಡಿ ಶಾಲಾ ಕಟ್ಟಡಗಳನ್ನು ಕಟ್ಟಿಸಿದ್ದು ಬಹುಜನಕ್ಕೆ ಇನ್ನೂ ತಿಳಿಯಬೇಕಾಗಿದೆ.

ಉಡುಪಿಗೆ ಬರುವ ಸಾವಿರಾರು ಜನಕ್ಕೆ ತಂಗಲು ''ಅಧೋಕ್ಷಜ'', ''ಕೃಷ್ಣಧಾಮ''ವೆಂಬ ಎರಡು ಧರ್ಮಶಾಲೆಗಳು ಶ್ರೀಗಳ ಪ್ರೇರಣೆಯಿಂದ ಸಜ್ಜಾಗಿವೆ. ಶ್ರೀಕೃಷ್ಣ ಮಠದ ನವೀಕರಣ ಬಹುವಿಧವಾಗಿ

ನಡೆದು ಹೊಸ ಸೌಲಭ್ಯ ಸಿಕ್ಕುವಂತಾಗಿದೆ. ತಿರುಪತಿ, ಬದರಿಗಳಲ್ಲಿನ ಶ್ರೀಮಠಗಳ ನಿರ್ಮಾಣ ಶ್ರೀಗಳವರ ದೊಡ್ಡ ಸಾಧನೆ.

## ಮಠಗಳೊಂದಿಗೆ ಸಂಪರ್ಕ

ಅನೇಕ ಮಾಧ್ವಪೀಠಾಧಿಪತಿಗಳನ್ನು ಅವರೆಲ್ಲರಿಗೂ ಅದ್ದೂರಿ ಸ್ವಾಗತ ನೀಡಿ ಉಡುಪಿಗೆ ಬರಮಾಡಿಕೊಂಡು ಅಖಿಲ ಮಾಧ್ವರ ಸ್ನೇಹ ಸಾಮರಸ್ಯದ ದಿವ್ಯ ಸಂಗೀತಕ್ಕೆ ಉಡುಪಿಯಲ್ಲಿ ಪ್ರಸ್ತಾರ ಹಾಕಿ ಅದನ್ನು ಸರ್ವತೋಮುಖವಾಗಿ ವಿಸ್ತಾರಗೊಳಿಸಿದ ಹೆಮ್ಮೆಯ ಸಾಧನೆ ಶ್ರೀಗಳವರದು. ಶ್ರೀ ಉತ್ತರಾದಿ ಮಠದ ಶ್ರೀಗಳು, ಶ್ರೀ ರಾಘವೇಂದ್ರ ಮಠಾಧೀಶರು, ಶ್ರೀ ವ್ಯಾಸರಾಜ ಮಠದ ವಿದ್ಯಾಸಿಂಹಾಸನಾಧೀಶರೂ, ಅಕ್ಷೋಭ್ಯತೀರ್ಥ ಮಠದ ಪೀಠಾಧಿಪತಿಗಳೂ, ಗೋಕರ್ಣಪರ್ತಗಾಳಿ ಜೀವೋತ್ತಮ ಮಠಾಧೀಶರೂ, ಸುಬ್ರಹ್ಮಣ್ಯ ಮಠಾಧೀಶರೂ, ಚಿತ್ರಾಪುರ ಮಠಾಧೀಶರೂ, ಎಡನೀರು ಸ್ವಾಮಿಗಳೂ ಮುಂತಾದ ಹಲವಾರು ಮಠಪೀಠಗಳ ಅಧಿಪತಿಗಳನ್ನು ಸಾದರ ಸಂಭ್ರಮದಿಂದ ಬರಮಾಡಿಕೊಂಡು ನಾವೆಲ್ಲರೂ ಒಂದು ಎಂಬ ಬಾಂಧವ್ಯದ ಬಂಧನದಿಂದ ಎಲ್ಲ ಪೀಠಾಧಿಪತಿಗಳನ್ನೂ ಒಂದುಗೂಡಿಸುವ ಮಹಾ ಸಾಧನೆಯನ್ನು ಮಾಡಿದ ಶ್ರೀಗಳವರೆಂದರೆ ಶ್ರೀ ಪೇಜಾವರ ಶ್ರೀಗಳವರೊಬ್ಬರೇ.

ಮಾಧ್ವ ಪೀಠಾಧಿಪತಿಗಳು ಮಾತ್ರವಲ್ಲದೇ ಬೇರೆ ಬೇರೆ ಮತೀಯ ಪೀಠಪತಿಗಳನ್ನು ಪುರಸ್ಕರಿಸಿ ಮಠೀಯ ಮತೀಯ ಸೌಹಾರ್ದವನ್ನು ಪರಿಷ್ಕರಿಸಿ ಹೊಸ ಹಾದಿಯನ್ನು ಹುಡುಕಿ ತೆಗೆದು ಅನುಷ್ಠಾನದಲ್ಲಿ ತಂದು ಇರಿಸಿದ ಹಿರಿಮೆ ಶ್ರೀ ಪೇಜಾವರ ಸ್ವಾಮಿಗಳಿಗೆ ಮಾತ್ರ ಮೀಸಲು. ಶ್ರೀ ಶಂಕರಾಚಾರ್ಯರ ಪೀಠಗಳಾದ ಕಂಚಿ, ಶೃಂಗೇರಿ, ಪುರಿಯ ಪೀಠಾಧಿಪತಿಗಳನ್ನು ಕಂಡು ಮಾತನಾಡಿದ್ದಾರೆ. ಅದೇ ರೀತಿ ಸಿದ್ಧಗಂಗಾ ಮಠ, ಚಿತ್ರದುರ್ಗದ ಬೃಹನ್ಮಠ, ಹುಬ್ಬಳ್ಳಿಯ ಶ್ರೀ ಮೂರುಸಾವಿರ ಮಠ, ಗದಗಿನ ತೋಂಟದಾರ್ಯ ಮಠ, ಸಿರಿಗೆರೆಯ ತರಳಬಾಳು ಮಠ, ಆದಿ ಚುಂಚನಗಿರಿಯ ಮಠ ಹೀಗೆ ಹಲವಾರು ವಿವಿಧ ಮತಗಳ ಗುರುಗಳ ಮಠಗಳಿಗೆ ಭೇಟ್ಟಿ ನೀಡಿದ್ದಾರೆ. ಅದಕ್ಕೆ ಪ್ರತಿಯಾಗಿ ಈ ಮಾನ್ಯ ಪೀಠಾಧಿಪತಿಗಳೆಲ್ಲ ಉಡುಪಿಗೆ ಬಂದು ಶ್ರೀಗಳವರನ್ನು ಕಂಡು ಚರ್ಚಿಸಿದ್ದಾರೆ.

ಶ್ರೀಗಳವರ ವಿಶಾಲದೃಷ್ಟಿ ಪರಸ್ಪರರಲ್ಲಿ ಸಾಮರಸ್ಯ ಇತೋಪ್ಯತಿಶಯವಾಗಿ ಸಂವರ್ಧಿಸಬೇಕೆಂಬ ಅಭಿಲಾಷೆಯೇ ಅವರ ಇಂತಹ ಸಂಪರ್ಕ ಸಾಧನೆಯ ಫಲ.

## ಪಾದಯಾತ್ರೆ

ಮಹತ್ತ್ವದ ಸಂದರ್ಭದಲ್ಲೆಲ್ಲ ಶ್ರೀಗಳವರು ಪಾದಯಾತ್ರೆಗೆ ಸಿದ್ಧ. ಜನಸಂಪರ್ಕದ ನೇರಸಾಧನ. ಕಾರವಾರ ಜಿಲ್ಲೆಯ ಕೈಗಾದಲ್ಲಿ ಅಣುಶಕ್ತಿ ಸ್ಥಾವರ ಸ್ಥಾಪನೆ ಪರಿಸರಕ್ಕೆ ಅಪಾಯ. ಇದನ್ನರಿತ ಶ್ರೀಗಳು ಜನಜಾಗೃತಿಗೆ ಮುಂದಾದರು. ಪಾದಯಾತ್ರೆಯೇ ಅವರ ಹಿಡಿದ ಹಾದಿ. ಎರಡು ಸಲದ ಪಾದಯಾತ್ರೆ. ಒಂದು ಸಲ ಬಂಧನ. ಕೈಗಾದ ಬಗೆಗೆ ಜನರ ಕಣ್ಣು ತೆರೆಸಿತು. ಅಪಾಯಕಾರಿ ಸ್ಥಾವರ ಪರಿಸರಕ್ಕೆ ಮಾರಕ. ಆ ವಿಶ್ವಾಸವೇ ಜನಜಾಗೃತಿಗೆ ಪ್ರೇರೇಪಣೆ.

## ಹಿಂದೂ-ಮುಸ್ಲಿಮರಲ್ಲಿ ಬಾಂಧವ್ಯದ ಬೆಸುಗೆ

ಹಿಂದೂ-ಮುಸ್ಲಿಮರ ಸ್ನೇಹ-ಸಖ್ಯ ಸಾಧಿಸುವುದರಲ್ಲಿ ಶ್ರೀಗಳವರ ಪಾತ್ರ ಗಣನೀಯ. ದಿಲ್ಲಿಯ ಮುಸ್ಲಿಮ್ ಧುರೀಣರೊಡನೆ ರಾಮಜನ್ಮಭೂಮಿ ವಿಷಯದಲ್ಲಿ ಸದ್ಭಾವನೆ ಮೂಡಿಸಲು ಸಾಕಷ್ಟು ಶ್ರಮಿಸಿದ ಶ್ರೀಗಳವರೆಂದರೆ ಶ್ರೀ ಪೇಜಾವರ ಸ್ವಾಮಿಗಳು. ಕರ್ನಾಟಕದಲ್ಲಿಯೂ ಕೋಮು ಸೌಹಾರ್ದ

ಸ್ಥಾಪನೆಗೆ ಅವರ ಪರಾಕಾಷ್ಠೆಯ ಪ್ರಯತ್ನ ಮಾಡಿದ್ದುಂಟು. ಅಖಿಲ ಭಾರತ ಮುಸ್ಲಿಮ್ ನಾಯಕರದ ಶ್ರೀ ಆಲಿಯಾನ್ ಅವರನ್ನು ಉಡುಪಿಗೆ ಬರಮಾಡಿಕೊಂಡು, ಜಾತೀಯ ಸೌಹಾರ್ದವನ್ನು ಕಾಪಾಡಿಕೊಳ್ಳುವ ವಿಷಯದಲ್ಲಿ ಕೂಲಂಕಷವಾದ ಸಮಾಲೋಚನೆ ನಡೆಸಿದರು. ಶ್ರೀ ಆಲಿಯಾನ್ ಅವರು ಭಟಕಳಕ್ಕೆ ಶ್ರೀಗಳವರನ್ನು ಕರೆಸಿಕೊಂಡು ಪರಸ್ಪರ ಸೌಹಾರ್ದ ಸ್ಥಾಪನೆಯ ವಿಷಯದಲ್ಲಿ ವಿಚಾರವಿನಿಮಯ ನಡೆಸಿದರು.

ಶ್ರೀಕೃಷ್ಣ ಮಠದ ರಾಜಾಂಗಣದಲ್ಲಿ ೧೬-೯-೮೪ರಂದು ನಡೆದ ಈದ ಮಿಲನ್ ಸೌಹಾರ್ದಕೂಟದಲ್ಲಿ ಶ್ರೀ ಶ್ರೀಗಳವರು ಜಮಾತ್-ಎ-ಇಸ್ಲಾಮ್ ಹಿಂದಿನ ನಾಯಕರೊಂದಿಗೆ ನಿಂತು ಒಂದೇ ವೇದಿಕೆಯಿಂದ ಕೋಮು ಸೌಹಾರ್ದಕ್ಕೆ ಕರೆ ಇತ್ತರು. ಈ ಸೌಹಾರ್ದಕೂಟದಲ್ಲಿ ಸ್ವಾಮಿಗಳವರ ಕರೆಯಮೇರೆಗೆ ಜಮಾತ್-ಎ-ಇಸ್ಲಾಮಿನ ಧುರೀಣರಾದ ಶ್ರೀ ಇಬ್ರಾಹಿಮ ಸಯೀದ ಅವರು, ಮುಸ್ಲಿಮ್ ನಾಯಕರಾದ ಡಾ। ಎಸ್. ಅಹಮ್ಮದ ಅವರೂ ಭಾಗವಹಿಸಿದ್ದರು. ಹಿಂದೂ ಮುಸ್ಲಿಮ್ ಪ್ರಮುಖರನ್ನು ರಾಜಾಂಗಣದಲ್ಲಿ ಏರ್ಪಡಿಸಿದ ಈದ ಮಿಲನ್ ಕಾರ್ಯಕ್ರಮಕ್ಕೆ ಸಹಸ್ರಾರು ಹಿಂದೂ-ಮುಸ್ಲಿಮ್-ಕ್ರೈಸ್ತ ಬಾಂಧವರು ಸೇರಿದ್ದರಿಂದ ಎಲ್ಲ ಜಾತಿಯ ಜನರಲ್ಲಿ ಪ್ರೀತಿ ವಿಶ್ವಾಸ ಕುದುರಿಸುವ ದೃಷ್ಟಿಯಿಂದ ಈ ಕಾರ್ಯಕ್ರಮ ಯಶಸ್ವಿಯಾಯಿತು.

ಕರ್ನಾಟಕದ ರಾಮನಗರದಲ್ಲಿ ಜಾತೀಯ ದಂಗೆಯ ದಳ್ಳುರಿಯಿಂದ ಬಳಲಿದ ಸಂತ್ರಸ್ತರಿಗೆ ಶ್ರೀಗಳವರು ತಾವೇ ಸಾಂತ್ವನ ಗೈದರು. ದ್ವೇಷದ ದಾವಾನಲದಲ್ಲಿ ಸಿಕ್ಕು ದಗ್ಧ ಮುಗ್ಧರಾಗಿ ಕುಳಿತ ಜನರ ದಯನೀಯ ಪರಿಸ್ಥಿತಿ ನೋಡಿ ಕರುಳು ಕರಗಿ ಶ್ರೀಗಳು ಅವರಿಗೆಲ್ಲ ಪರಿಹಾರ ಒದಗಿಸಿದರು.

## ಆಧ್ಯಾತ್ಮ ಶಿಬಿರ-ಜ್ಞಾನಸತ್ರ

ಮಾಧ್ವರಿಗೆ ಆಚಾರ ಮುಖ್ಯ. ಆಚಾರಹೀನಮ್ ನ ಪುನಂತಿ ವೇದಾಃ. ಆ ಆಚಾರಕ್ಕೆ ಪ್ರಚೋದನೆ ಮಾಡಬೇಕಾದರೆ ಒಳ್ಳೇ ವಿಚಾರ ತಿಳಿದಿರಬೇಕು. ಪಾಶ್ಚಾತ್ಯ ಶಿಕ್ಷಣದಿಂದ ನಾಸ್ತಿಕ್ಯದತ್ತ ವಾಲುತ್ತಿದ್ದ ಯುವ ಜನಾಂಗಗಳ ಗೃಹಸ್ಥರಿಗೂ ಆಚಾರ-ವಿಚಾರ ಎರಡರ ಶಿಕ್ಷಣ ಕೊಡಲು ಶ್ರೀಗಳವರು ಜ್ಞಾನಸತ್ರಗಳನ್ನು, ಶೈಕ್ಷಣಿಕ ಶಿಬಿರಗಳನ್ನು ಏರ್ಪಡಿಸಿದ್ದಾರೆ. ಮೊಟ್ಟ ಮೊದಲ ಅಧ್ಯಾತ್ಮ ಶಿಬಿರವು ಸೋದೆಯ ವಾದಿರಾಜಸ್ವಾಮಿಗಳವರ ವೃಂದಾವನದ ಸನ್ನಿಧಿಯಲ್ಲಿ ವೈಭವದಿಂದ ನಡೆಯಿತು. ಸಂಧ್ಯಾವಂದನೆ, ಪೂಜೆ, ದೇವತಾರ್ಚನೆಗಳ ಪ್ರತ್ಯಕ್ಷಿಕೆ ಹಾಗೂ ಪ್ರಯೋಗಗಳು ಜನರ ಆಚಾರವನ್ನು ತಿದ್ದಿದರೆ, ಪಂಡಿತರ ಹಾಗೂ ಶ್ರೀಗಳವರ ಭಾಷಣ ಪ್ರವಚನಗಳು ಆಧುನಿಕರ ವೈಚಾರಿಕ ದಿಸೆಯನ್ನೇ ಬದಲಿಸಿದವು.

ಎರಡನೆಯ ಶಿಬಿರವು ಶಿವಮೊಗ್ಗಾ ಜಿಲ್ಲೆಯಲ್ಲಿ ಮಹಿಷಿಯಲ್ಲಿ ತುಂಗೆಯ ತಡೆಯಲ್ಲಿ ನಡೆಯಿತು. ಮೂರನೆಯ ಶಿಬಿರ ತುಮಕೂರಿನಲ್ಲಿಯೂ ನಾಲ್ಕನೆಯದು ಹೊಸಪೇಟೆಯಲ್ಲಿಯೂ ಐದನೆಯದು ಕೊಯಿಮತ್ತೂರಿನಲ್ಲಿಯೂ ಅನಂತರ ಉಡುಪಿ, ಬೆಂಗಳೂರು, ಮೈಸೂರು ಮುಂತಾದ ಹಲವಾರು ಕಡೆಗಳಲ್ಲಿ ನಡೆದವು.

## ಪ್ರತಿಷ್ಠಾನಗಳು

ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ತಾವು ಹಮ್ಮಿಕೊಂಡ ಕಾರ್ಯಗಳ ನಿರ್ವಹಣೆಗೆ ನಾಲ್ಕು ಪ್ರತಿಷ್ಠಾನಗಳನ್ನು ಸ್ಥಾಪಿಸಿದ್ದಾರೆ. ತಮ್ಮ ೫೦ನೆಯ ಜನ್ಮ ದಿನದ ಸಂದರ್ಭದಲ್ಲಿ ಭಕ್ತರು ನೀಡಿದ ಕಾಣಿಗಳಿಂದ ''ಆನಂದತೀರ್ಥ ಪ್ರತಿಷ್ಠಾನ''ವನ್ನು ಸ್ಥಾಪಿಸಿ ಜನ ಸಾಮಾನ್ಯರಿಗೆ ಬೇಕಾಗುವ ಗ್ರಂಥ ಪ್ರಕಾಶನಕ್ಕೆ ಅನುವು ಮಾಡಿದ್ದರೆ 'ಜನತಾ ಕಲ್ಯಾಣ ನಿಧಿ'ಯಿಂದ ಅನಾಥ, ಅಂಗವಿಕಲ ಜನರಿಗೆ

ನೆರವಾಗಲು ಆಶ್ರಮ, ಚಿಕಿತ್ಸಾಲಯಗಳನ್ನು ನಡೆಸುತ್ತಿದ್ದಾರೆ.

ಶ್ರೀಮಧ್ವಾಚಾರ್ಯರ ೭೫೦ನೇ ಜಯಂತಿ ಸಂದರ್ಭದಲ್ಲಿ ಸಂಗ್ರಹಿಸಿದ ನಿಧಿಯಲ್ಲಿ ೧೦ ಲಕ್ಷ ರೂ.ಗಳ ''ಮಧ್ವಾಚಾರ್ಯ ಜಯಂತಿ ಪ್ರತಿಷ್ಠಾನ'' ರೂಪಿಸಿ ಕನ್ನಡ, ತೆಲುಗು, ತಮಿಳು ಭಾಷೆಗಳಲ್ಲಿ ಮಧ್ವ ತತ್ತ್ವಜ್ಞಾನದ ಪ್ರಕಟನೆಗೆ ಏರ್ಪಾಟು ಮಾಡಿದ್ದಾರೆ. ವಿದ್ವಾಂಸರಿಗೆ ಪೋಷಣೆ ನೀಡಲು 'ಪೂರ್ಣಪ್ರಜ್ಞ ಪ್ರತಿಷ್ಠಾನ', 'ವಿಜಯಧ್ವಜ ಪ್ರತಿಷ್ಠಾನ' ಎಂಬ ಎರಡು ನಿಧಿಗಳು. ಪ್ರತಿಯೊಂದರಲ್ಲಿ ಏಳು ಲಕ್ಷ ರೂ. ನಿಧಿ. ಅಧ್ಯಯನ ಮುಗಿಸಿ ಸಿದ್ಧರಾದ ವಿದ್ವಾಂಸರಿಗೆ ತಲಾ ಒಂದು ಲಕ್ಷ ರೂ. ಠೇವಣಿ ಇರಿಸಿ ಅದರ ಬಡ್ಡಿಯ ಹಣವನ್ನು ಮಾತ್ರ ಅವರ ಪೋಷಣೆಗೆ ನೀಡಲಾಗುವುದು.

ಶ್ರೀ ವಿಶ್ವೇಶತೀರ್ಥರು, ಹಿಂದು ಸೇವಾ ಪ್ರತಿಷ್ಠಾನದ ಕುಲಪತಿಗಳು, ಅದರ ಅಂಗವಾಗಿ ಸಾವಿರಾರು ಸೇವಾ ವ್ರತಿಗಳು. ದೇಶದ ಹಳ್ಳಿಪಳ್ಳಿ, ಕೊಳಚೆ ಪ್ರದೇಶಗಳಲ್ಲಿ, ಶಾಲೆ, ಬಾಲ ಸಂಸ್ಕಾರ ಕೇಂದ್ರಗಳನ್ನು ನಡೆಸುವ ಸೇವಾ ಕಾರ್ಯದಲ್ಲಿ ನಿರತರಾಗಿದ್ದಾರೆ. ಅವರ ಸೇವಾವ್ರತಕ್ಕೆ ಶ್ರೀಗಳೇ ಸ್ಫೂರ್ತಿ.

## ಉಕ್ಕಿಬಂದ ಸಾಧನೆ

ಶ್ರೀಗಳವರ ಮೂರು ಪರ್ಯಾಯಗಳಲ್ಲಿ ಅರ್ಧ ಶತಮಾನದ ಕಾಲಖಂಡದಲ್ಲಿ ಅವರು ಮಾಡಿದ ನೂರು ಸಾಧನೆಗಳನ್ನು ಅಳವಡಿಸಬೇಕೆಂಬುದು ನಮ್ಮ ಯತ್ನ. ಸಾಧನೆಗಳು ಸಾವಿರ ಸಮೀಪಿಸಿದ ಸುಳಿವು ತಿಳಿಯುತ್ತಲೇ ಮುಖ್ಯ ಘಟನೆಗಳೇ ೧೫೦ಕ್ಕೂ ಮಿಕ್ಕಿ ಬಂದವು. ಸಂಸ್ಕೃತದ ಒಂದು ಸುಭಾಷಿತದಲ್ಲಿ ''ಮುಗಿಲೇ ಕಾಗದವಾಗಿ, ಸಾಗರವೇ ಮಸಿಯಾಗಿ, ಕಲ್ಪವೃಕ್ಷದ ಶಾಖೆಯೇ ಲೇಖನಿಯಾಗಿ, ಆದಿಶೇಷನೇ ಬರೆಯ ಹೊರಟರೆ ಭಗವಂತನ ಗುಣ ವರ್ಣನೆ ಮಾಡಬಹುದು'' ಎಂದು ಹೇಳಿದೆ. ಶ್ರೀ ಪೇಜಾವರ ಶ್ರೀಗಳ ಸಾಧನೆಗಳನ್ನು ಬಣ್ಣಿಸಲು ಹೊರಟ ನಮಗೆ ಆ ಉಕ್ತಿ ನೆನಪಿಗೆ ಬರುತ್ತದೆ.

**(ಸಹಾಯ – ಡಿ. ವಿ. ಮುತಾಲಿಕ ದೇಸಾಯಿ 'ಪೂರ್ಣಪ್ರಜ್ಞಾ', ಸ್ಮರಣಸಂಚಿಕೆ, ೧೯೯೩, ಚಾತುರ್ಮಾಸ್ಯ ಸೇವಾಸಮಿತಿ, ಹುಬ್ಬಳ್ಳಿ, ಧಾರವಾಡ)**

●

೪-೨

# ವೈಶಿಷ್ಟ್ಯಪೂರ್ಣ ಪೇಜಾವರ ಪರ್ಯಾಯ

(೧೯೮೪-೮೬)

ಉಡುಪಿಯ ಹೆಸರು ಶ್ರೀಮಧ್ವ ಕರಾರ್ಚಿತ - ವಾದಿರಾಜ ಸಂಪೂಜಿತ ಶ್ರೀಕೃಷ್ಣನಿಂದಾಗಿ ಹೇಗೆ ಜಗದ್ವ್ಯಾಪಿಯಾಯಿತೋ ಅಂತೆಯೇ ಪೇಜಾವರ ಮಠೀಯ ಶ್ರೀ ವಿಶ್ವೇಶತೀರ್ಥರ ಹೆಸರು ಕೂಡಾ ಚಿರಪರಿಚಿತ. ಭಾರತದಾದ್ಯಂತ ಅವರು ಸಂದರ್ಶಿಸದ ಸ್ಥಳಗಳಿಲ್ಲ, ಭಾಗವಹಿಸದ ಧಾರ್ಮಿಕ ಕಾರ್ಯಕ್ರಮಗಳಿಲ್ಲವೆಂದರೆ ಉತ್ಪ್ರೇಕ್ಷೆಯಾಗಲಾರದು. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗಿನ ಪವಿತ್ರ ಪುಣ್ಯಕ್ಷೇತ್ರಗಳ ಪರ್ಯಟನೆಗೈದುದಲ್ಲದೆ ಹೋದೆಡೆಯಲ್ಲೆಲ್ಲ ಹಿಂದೂ ಧರ್ಮ ಪ್ರಚಾರದ ಹರಿಕಾರರಾಗಿ ಧಾರ್ಮಿಕ ಕ್ರಾಂತಿಗೆ ಕಾರಣೀಭೂತರಾಗಿದ್ದಾರೆ. ಸಭೆ, ಸಮಾರಂಭ, ಸಮ್ಮೇಳನ, ವಿದ್ವದ್ಗೋಷ್ಠಿ, ಧಾರ್ಮಿಕ ಪ್ರವಚನಗಳಲ್ಲಿ ಅವರ ಸುಮಧುರ ಕಂಠದಿಂದ ಹೊರಹೊಮ್ಮುವ ವಾಕ್ಪ್ರವಾಹವನ್ನು ಕಿವಿಯಾರೆ ಕೇಳುವ ಸದವಕಾಶಕ್ಕಾಗಿ ಹಿಂದೂ ಧರ್ಮಾಭಿಮಾನಿಗಳು ಉತ್ಸುಕರಾಗಿದ್ದಾರೆ. ಧರ್ಮನಿಷ್ಟ - ವಿದ್ವತ್ಪುರುಷ ಶ್ರೀ ವಿಶ್ವೇಶತೀರ್ಥರು ಕಳೆದ ೧೯೮೪ ಜನವರಿ ೧೮ರಂದು ಶ್ರೀಕೃಷ್ಣ ಪೂಜಾದೀಕ್ಷೆಯಾಗಿ ತೃತೀಯ ಬಾರಿಗೆ ಸರ್ವಜ್ಞಪೀಠಾರೋಹಣ ಮಾಡಿದರು.

ಪೇಜಾವರ ಶ್ರೀಗಳವರ ಪರ್ಯಾಯವೆಂದರೆ ಉಡಪಿಯ ಶ್ರೀಕೃಷ್ಣನಿಗೆ ನಿತ್ಯೋತ್ಸವ. ಉಡುಪಿಯ ನಾಗರಿಕರಿಗೆ ಧಾರ್ಮಿಕ-ಸಾಂಸ್ಕೃತಿಕ-ವೈವಿಧ್ಯಮಯ ಕಾರ್ಯಕ್ರಮಗಳ ಸುಗ್ಗಿ. ಕಲಾಭಿಮಾನಿಗಳಿಗೆ ಬಿಡುವಿಲ್ಲದ ಕಲಾ ಕಾರ್ಯಕ್ರಮಗಳು, ಪ್ರತಿಭಾನ್ವಿತ ವಿದ್ವಾಂಸರ ಪ್ರವಚನ - ಉಪನ್ಯಾಸ, ಹರಿಕಥೆ, ಸಂಗೀತ ಕಚೇರಿ, ನೃತ್ಯ ಕಾರ್ಯಕ್ರಮ, ನಾಟಕ-ಯಕ್ಷಗಾನಗಳ ಅವಿರತ ಮನರಂಜನೆ ! ವಾರದಲ್ಲಿ ಏನಿಲ್ಲವೆಂದರೂ ಒಂದೆರಡು ಧಾರ್ಮಿಕ - ಸಾಂಸ್ಕೃತಿಕ ಕಾರ್ಯಕ್ರಮಗಳು ಮಾಮೂಲು. ಇದಕ್ಕೂ ಮೀರಿದಂತೆ ಶ್ರೀಕೃಷ್ಣನಿಗೆ ಭಕ್ತರ ಸೇವೋತ್ಸವಗಳ ಹೊರೆ. ಗರುಡೋತ್ಸವ, ಬ್ರಹ್ಮೋತ್ಸವ, ಸುವರ್ಣೋತ್ಸವ, ಸಪ್ತೋತ್ಸವಗಳಾದಿ ಸೇವೆಗಳ ಮಹಾಪೂರ.

ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥರದು ವಿಶಾಲ ಹೃದಯ. ಸದಾ ಚಿಂತನೆಯ ಮೂರ್ತಿ ಅವರು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ಶ್ರೀಕೃಷ್ಣ ಮಠದ ಸರ್ವಾಂಗೀಣ ಅಭಿವೃದ್ಧಿ, ಬರುವ ಯಾತ್ರಾರ್ಥಿ ಭಕ್ತರಿಗೆ ಸಕಲ ಸೌಕರ್ಯದ ನೆರವು ಮುಂತಾದವುಗಳ ಬಗೆಗೆ ಶ್ರೀ ವಿಶ್ವೇಶತೀರ್ಥರದು ಒಂದರ ನಂತರ ಇನ್ನೊಂದರಂತೆ ಅಂತ್ಯವಿಲ್ಲದ ಅಭಿವೃದ್ಧಿ ಕಾರ್ಯಗಳು.

ನಡೆದುದು ಅತ್ಯಲ್ಪ, ನಡೆಯಬೇಕಾದುದು ಬಹಳಷ್ಟಿದೆ ಎಂಬುದು ಅವರ ನಿಲುವು. ಪ್ರತಿಯೊಂದು ಕಾರ್ಯಕ್ರಮಗಳಲ್ಲೂ ಅವರದೇ ದಿಟ್ಟ ಹೆಜ್ಜೆ, ಸ್ಪಷ್ಟ ನಡೆನುಡಿ ಧರ್ಮಾಭಿಮಾನಿಗಳ ಪ್ರೀತ್ಯಾದರಗಳಿಗೆ ಕಾರಣವಾಗಿದೆ. ಪರ್ಯಾಯದ ಈ ಎರಡು ವರ್ಷದ ಅದ್ಭುತ ಕಾರ್ಯಕ್ರಮಗಳು ''ನ ಭೂತೋ ನ ಭವಿಷ್ಯತಿ'' ಎಂಬಂತೆ ಯಶಸ್ವಿಯಾಗಿ ಜರಗಿರುವುದು ಪ್ರಶಂಸನೀಯ. ಪ್ರತಿಯೊಂದು ಕಾರ್ಯಕ್ರಮಗಳೂ ಅಚ್ಚುಕಟ್ಟಿನಿಂದ, ಶಿಸ್ತಿನಿಂದ ನೆರವೇರಿ ಆಸ್ತಿಕರ ಹೆಗ್ಗಳಿಕೆಗೆ ಪಾತ್ರವಾಗಿದೆ, ಶ್ರೀಕೃಷ್ಣ ಮಠದಲ್ಲಿ ಜರಗುವ ಯಾವತ್ತೂ ಹಬ್ಬ-ಹರಿದಿನ-ಉತ್ಸವಗಳು ಈ ಪರ್ಯಾಯದಲ್ಲಿ ಅದ್ದೂರಿಯಾಗಿ ನಡೆದಿರುವುದು ವೈಶಿಷ್ಟ್ಯಪೂರ್ಣ.

## ಧಾರ್ಮಿಕ

ಶ್ರೀ ವಿಶ್ವೇಶತೀರ್ಥರ ತೃತೀಯ ಪರ್ಯಾಯಾವಧಿಯಲ್ಲಿ ಧಾರ್ಮಿಕ - ವಿಧಿ ವಿಧಾನಗಳಿಗೇನೂ ಕೊರತೆಯಿಲ್ಲ. ಶ್ರೀಕೃಷ್ಣ ಜನ್ಮಾಷ್ಟಮಿ, ರಾಮನವಮಿ, ವಸಂತೋತ್ಸವ, ಗಣೇಶ ಚತುರ್ಥಿ, ನವರಾತ್ರಿ ಮಹೋತ್ಸವಗಳಲ್ಲಿ ಶ್ರೀಕೃಷ್ಣ ಮಠದಲ್ಲಿ ಅವಿರತ ಧಾರ್ಮಿಕ ಪ್ರವಚನ, ಉಪನ್ಯಾಸ ಮಾಲಿಕೆಗಳು ನಿಯೋಜಿಸಲ್ಪಟ್ಟಿದ್ದವು. ಕನಕದಾಸ - ಪುರಂದರದಾಸರ ಆರಾಧನಾ ಮಹೋತ್ಸವ ಶ್ರೀಗಳವರ ಹಿರಿತನದಲ್ಲಿ ವೈವಿಧ್ಯಪೂರ್ಣವಾಗಿ ಜರಗಿದೆ. ಶ್ರೀ ಪಲಿಮಾರು ಮಠದ ಶ್ರೀಗಳವರ ಹಿರಿತನದಲ್ಲಿ ವಿಶ್ವಹಿಂದೂ ಪರಿಷತ್ ಸಮಾವೇಶ ಶ್ರೀಕೃಷ್ಣ ಮಠದ ರಾಜಾಂಗಣದಲ್ಲಿ ನೆರವೇರಿತ್ತು. ಶ್ರೀ ಸುಬ್ರಹ್ಮಣ್ಯ ಮಠದ ಶ್ರೀ ವಿದ್ಯಾಭೂಷಣತೀರ್ಥರ ಭಾಗವತ ವಾಚನ ಹಾಗೂ ಪೇಜಾವರ ಶ್ರೀಗಳ ಪ್ರವಚನ ಯಶಸ್ವಿಯಾಗಿ ಜರಗಿವೆ. ಶ್ರೀ ಜಯತೀರ್ಥ ಆಚಾರ್ಯರಿಂದ ಭಾಗವತ ಪ್ರವಚನ, ಶ್ರೀ ಬನ್ನಂಜೆ ರಾಘವೇಂದ್ರತೀರ್ಥರಿಂದ ಭಾಗವತ ಸಪ್ತಾಹ, ಬಳ್ಳಾರಿ ಕೃಷ್ಣಮೂರ್ತಿ ಆಚಾರ್ಯರಿಂದ ಭಾಗವತ ಪ್ರವಚನ, ಎಡನೀರು ಶ್ರೀಗಳವರ ವಾಚನ - ಪ್ರವಚನ; ಶ್ರೀ ಎಸ್. ರಾಘವಾಚಾರ್ ರಿಂದ ಧಾರ್ಮಿಕ ಉಪನ್ಯಾಸ ಮುಂತಾದ ಹತ್ತು ಹಲವಾರು ಧಾರ್ಮಿಕ ಕಾರ್ಯಕ್ರಮಗಳು ಶ್ರೀಕೃಷ್ಣ ಮಠದಲ್ಲಿ ಯಶಸ್ವಿಯಾಗಿ ಜರಗಿವೆ. ಎರಡು ವರ್ಷವೂ ಪರ್ಯಾಯ ಮಠದಿಂದ ಉಚಿತ ವೇದ ಆಗಮ - ಪೌರೋಹಿತ್ಯ ತರಗತಿಗಳು ನಡೆಸಲ್ಪಟ್ಟು ಪೌರೋಹಿತ್ಯ ಶಿಕ್ಷಣವನ್ನು ಉತ್ತೇಜಿಸಿದೆ. ಧರ್ಮೋಪನಯನದ ಮೂಲಕ ಬ್ರಾಹ್ಮಣ ವಟುಗಳು ಶ್ರೀಕೃಷ್ಣ ಮಠದಲ್ಲಿ ಶ್ರೀ ವಿಶ್ವೇಶತೀರ್ಥರ ಅನುಗ್ರಹಕ್ಕೆ ಭಾಜನರಾದರು. ಶ್ರೀಗಳವರಿಂದ ಮಠದ ಶಿಷ್ಯವೃಂದಕ್ಕೆ ಸಂಸ್ಕೃತಾಧ್ಯಯನ, ಸುಧಾ ಪ್ರವಚನ ನಡೆಯುತ್ತಿದೆ. ಮಾಧ್ವ ರಾದ್ಧಾಂತ ಸಂವರ್ಧಿನಿ ಸಭೆಯಲ್ಲಿ ಅಣುವ್ಯಾಖ್ಯಾನ ಉಪನ್ಯಾಸ, ವಿದ್ವದ್ಗೋಷ್ಠಿ. ಶ್ರೀ ಶ್ರೀಧರ ಆಚಾರ್ಯ ರಿಂದ ಹರಿಕಥೆ ಮುಂತಾದ ಕಾರ್ಯಕ್ರಮಗಳು ಜರಗಿವೆ.

ಶ್ರೀ ಪೇಜಾವರ ಶ್ರೀ ವಿಶ್ವೇಶತೀರ್ಥರ ತೃತೀಯ ಪರ್ಯಾಯಾವಧಿಯಲ್ಲಿ ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀ ಗಂಗಾಧರ ರಾಜಯೋಗೀಂದ್ರರು, ಹುಬ್ಬಳ್ಳಿಯ ಶ್ರೀ ವಿಜಯಾನಂದ ಸ್ವಾಮೀಜಿ, ಶ್ರೀ ಎಡನೀರು ಮಠದ ಶ್ರೀ ಕೇಶವಾನಂದ ಭಾರತಿ ಶ್ರೀಗಳು, ಶ್ರೀಮದುತ್ತರಾದಿ ಮಠಾಧೀಶರು, ಶ್ರೀ ಶೃಂಗೇರಿ ಶ್ರೀಗಳು ಮುಂತಾದ ಯತಿವರೇಣ್ಯರು ಉಡುಪಿಗೆ ಚಿತ್ತೈಸಿ, ಯಥೋಚಿತ ಸತ್ಕಾರಗಳನ್ನು ಸ್ವೀಕರಿಸಿ, ಧಾರ್ಮಿಕ ಪ್ರವಚನಗಳನ್ನಿತ್ತು ಧರ್ಮಾಭಿಮಾನಿಗಳ ಹಸಿವನ್ನು ತಣಿಸಿದ್ದಾರೆ. ಬಾಳೆಗಾರು ಮಠದ ಯತಿಗಳು ವಿಧಿವಶರಾದ ಹಿನ್ನೆಲೆಯಲ್ಲಿ ಮಠಕ್ಕೆ ಉತ್ತರಾಧಿಕಾರಿಯನ್ನಾಗಿ ಶ್ರೀ ವಿಶ್ವೇಶತೀರ್ಥರು ತಮ್ಮ ವಿದ್ಯಾಪೀಠದ ಶಿಷ್ಯನೋರ್ವನನ್ನು ನಿಯುಕ್ತಗೊಳಿಸಿ ದೀಕ್ಷೆ ನೀಡಿರುವುದು ಮಹತ್ವದ ಸಂಗತಿ. ಪ್ರಸ್ತುತ ಬಾಳೆಗಾರು ಉತ್ತರಾಧಿಕಾರಿ ಶ್ರೀ ಪೇಜಾವರ ಶ್ರೀಗಳವರ ಸನ್ನಿಧಿಯಲ್ಲಿ ಶಿಕ್ಷಣ - ಸಂಸ್ಕೃತ ಗ್ರಂಥ ಅಧ್ಯಯನದಲ್ಲಿ ನಿರತರಾಗಿರುವುದು ಉಲ್ಲೇಖನೀಯ. ದೈವಜ್ಞ ಬ್ರಾಹ್ಮಣ

ಸಮಾಜಕ್ಕೆ ಪ್ರತ್ಯೇಕ ಗುರುಪೀಠ ಒದಗಿಸುವ ನಿಟ್ಟಿನಲ್ಲಿ ಶ್ರೀ ವಿಶ್ವೇಶತೀರ್ಥರು ಹೊನ್ನಾವರದ ಕರ್ಕಿಯ ಶ್ರೀ ರಾಮಚಂದ್ರ ಮಹಾಬಲೇಶ್ವರ ಭಟ್ರ ತೃತೀಯ ಪುತ್ರ ಚಿ। ರಮೇಶನಿಗೆ ಬ್ರಹ್ಮೋಪದೇಶ ಸಂದರ್ಭದಲ್ಲಿ ಕೃಷ್ಣ ಮಂತ್ರೋಪದೇಶ ಮೂಲಕ ಹರಸಿದರು. ಈ ವಟುವಿಗೆ ಮುಂದಿನ ಡಿಸೆಂಬರ್‌ನಲ್ಲಿ ಶ್ರೀ ಪೇಜಾವರ ಶ್ರೀಗಳವರು ಯತಿದೀಕ್ಷೆ ನೀಡಲಿದ್ದಾರೆ.

## ಸಾಂಸ್ಕೃತಿಕ

ಶ್ರೀಕೃಷ್ಣ ಜನ್ಮಾಷ್ಟಮಿ, ಗಣೇಶ ಚತುರ್ಥಿ, ನವರಾತ್ರಿ ಸಂದರ್ಭಗಳಲ್ಲಿ ಪ್ರತಿನಿತ್ಯ ಬಿಡುವಿಲ್ಲದ ಸಾಂಸ್ಕೃತಿಕ ಕಾರ್ಯಕ್ರಮಗಳ ವ್ಯವಸ್ಥೆ. ಹೊಸದಾಗಿ ಸಜ್ಜುಗೊಂಡ ರಾಜಾಂಗಣದಲ್ಲಿ ಪೂರ್ಣ ಭರ್ತಿಗೊಂಡ ಕಲಾ ಕಾರ್ಯಕ್ರಮಗಳು ರಸಿಕರನ್ನು ರಂಜಿಸಿತು. ವಿಸ್ತೃತ ಸಭಾಭವನದ ಕೊರತೆಯಿದ್ದ ಉಡುಪಿಗೆ 'ರಾಜಾಂಗಣ' ಸುಯೋಗ್ಯ ವೇದಿಕೆಯಾಗಿ ಮಳೆಗಾಲವೂ ಸೇರಿದಂತೆ ವರ್ಷವಿಡೀ ಕಲಾಕಾರ್ಯಕ್ರಮಗಳಿಗೆ ಮೀಸಲಾಗಿದೆ.

ಸಮೂಹ ಕಲಾವಿದರ 'ಹಂಸದಮಯಂತಿ' ನೃತ್ಯರೂಪಕ, ದಶಾವತಾರ ನೃತ್ಯರೂಪಕ, 'ಕಸ್ತಲೆ ರಾಜ್ಯೋಂಟು' ಬ್ರಾಹ್ಮಣ ಭಾಷೆಯ ತುಳುನಾಟಕ, ಕೊಡವೂರು ನಾಟಕ ಮಂಡಳಿಯವರ 'ಭೂಕೈಲಾಸ', ಶ್ರೀಕೃಷ್ಣ ಮತ್ತು ಕು। ಮಹಾಲಕ್ಷ್ಮಿ ಅಯ್ಯರ್ ಅವರ ಕೂಚುಪುಡಿ ನೃತ್ಯ, ಬೆಂಗಳೂರು ವಿದ್ಯಾಪೀಠದವರ 'ಪೃಚ್ಛತ ಭೋಃ ಪೃಚ್ಛತ' ಸಂಸ್ಕೃತ ನಾಟಕ, 'ಜನ್ಮ ಜನ್ಮಾಂತರ' ಹಾಸ್ಯ ನಾಟಕ, ಯಕ್ಷಗಾನ, ಶಿವಮೊಗ್ಗ ಶ್ರೀನಿವಾಸದಾಸರಿಂದ ಹರಿಕಥಾ ಕಾಲಕ್ಷೇಪ, ಕಾಂಚನ ಸಹೋದರಿಯರ ಸಂಗೀತ ಕಚೇರಿ, ಮಲ್ಪೆ ರಾಮದಾಸ ಸಾಮಗರ ಹರಿಕಥಾ ಸಪ್ತಾಹ, ಪ್ರೊ। ಎಂ. ಆರ್. ಶಾಸ್ತ್ರಿ, ಮಲ್ಪೆ ಶಂಕರನಾರಾಯಣ ಸಾಮಗರ ಕೂಡುವಿಕೆಯ 'ರಾವಣ ಮಂಡೋದರಿ ಸಂವಾದ', 'ಆನಂದ ಮುಕುಂದ' ನೃತ್ಯರೂಪಕ, ಸಂಗೀತ ಕಚೇರಿ, ನೃತ್ಯ ಕಾರ್ಯಕ್ರಮ ಮುಂತಾದ ವೈವಿಧ್ಯಮಯ ಮನರಂಜನೆಯ ಸಾಂಸ್ಕೃತಿಕ ಕಾರ್ಯಕ್ರಮಗಳು ಶ್ರೀ ವಿಶ್ವೇಶತೀರ್ಥರ ದಕ್ಷ ನೇತೃತ್ವದಲ್ಲಿ ನೆರವೇರಿ ಉಡುಪಿಯ ಕಲಾರಸಿಕರಿಗೆ ಅವಕಾಶವನ್ನೊದಗಿಸಿತು. ಪರ್ಯಾಯ ಶ್ರೀ ಪೇಜಾವರ ಶ್ರೀ ವಿಶ್ವೇಶತೀರ್ಥರು ಸ್ವತಃ ಕಲಾರಾಧಕ ರೆಂಬುದಕ್ಕೆ ಈ ಪರ್ಯಾಯದಲ್ಲಿ ಉಡುಪಿಯಲ್ಲಿ ಜರುಗಿದ ಅಸಂಖ್ಯ ಕಲಾ ಕಾರ್ಯಕ್ರಮ ನಿದರ್ಶನ. ಶ್ರೀಗಳವರು ಕಲಾವಿದರನ್ನು ಪ್ರಶಸ್ತಿ, ಪುರಸ್ಕಾರ, ಶ್ರೀಕೃಷ್ಣ ಪ್ರತೀಕಗಳ ಉಡುಗೊರೆಯೊಂದಿಗೆ ಗೌರವಿಸಿ ಆದರ್ಶ ಪರಂಪರೆಯನ್ನೇ ಸೃಷ್ಟಿಸಿದ್ದಾರೆ. ಶ್ರೀಕೃಷ್ಣ ಮಠದ ರಾಜಾಂಗಣ ಉತ್ತಮ ಮೌಲ್ಯದ ಕಲಾ ಕಾರ್ಯಕ್ರಮಗಳಿಗೆ ಸಾರ್ವಜನಿಕ ವೇದಿಕೆಯಾಗಿ ಲಭ್ಯವಾದುದು ಪ್ರಶಂಸನೀಯ.

## ಸನ್ಮಾನ ಪುರಸ್ಕಾರ

ಶ್ರೀ ವಿಶ್ವೇಶತೀರ್ಥರು ಕವಿ, ಕಲಾವಿದರು, ವಿದ್ವಾಂಸರನ್ನು ವಿಶಿಷ್ಟ ರೀತಿಯಲ್ಲಿ ಗೌರವಿಸುವರು. ಅಂತೆಯೇ ಅವರು ತನ್ನ ಪರ್ಯಾಯ ಪೀಠಾರೋಹಣ ಸುದಿನದಿಂದ ತೊಡಗಿ ಹತ್ತಾರು ಪ್ರತಿಭಾನ್ವಿತ ಅಗ್ರಗಣ್ಯರನ್ನು ಪರ್ಯಾಯ ಮಠದ ಪರವಾಗಿ ಪುರಸ್ಕರಿಸಿದ್ದಾರೆ. ಕನ್ನಡ ಚಿತ್ರರಂಗದ ಶ್ರೀನಾಥ್, ಬಾಲಕೃಷ್ಣ, ಹಿರಿಯ ಸಾಹಿತಿ ಡಾ। ಶಿವರಾಮ ಕಾರಂತ, ಸಂತ ಭದ್ರಗಿರಿ ಕೇಶವದಾಸ್, ಮಾಜಿ ಸಚಿವ ಅಮರನಾಥ ಶೆಟ್ಟಿ, ಮದ್ರಾಸಿನ ಡಾ। ನಾಗರಾಜ ರಾವ್, ಅಕಾಡೆಮಿ ಆಫ್ ಜನರಲ್ ಎಜುಕೇಶನಿನ ರಿಜಿಸ್ಟ್ರಾರ್ ಶ್ರೀ ಟಿ. ರಮೇಶ ಪೈ, ಶ್ರೀ ಪಿ. ಶ್ರೀಪತಿ ಆಚಾರ್ಯ ಹಾಗೂ ಬ್ಯಾಂಕಿಂಗ್ ಕ್ಷೇತ್ರದ ಅಗ್ರಮಾನ್ಯರಾದ ಶ್ರೀ ಎ. ಕೃಷ್ಣ ರಾವ್ (ಸಿಂಡಿಕೇಟ್ ಬ್ಯಾಂಕ್), ಶ್ರೀ ಸದಾನಂದ ಶೆಟ್ಟಿ (ವಿಜಯಾ

ಬ್ಯಾಂಕ್), ಶ್ರೀ ವೈ. ಎಸ್. ಹೆಗ್ಡೆ (ಕಾರ್ಪೊರೇಶನ್ ಬ್ಯಾಂಕ್), ಶ್ರೀ ಪಿ. ರಘುರಾಮ್ (ಕರ್ಣಾಟಕ ಬ್ಯಾಂಕ್) ಮುಂತಾದ ಹಿರಿಯರು ಸನ್ಮಾನ ಪೂರ್ವಕ ಪುರಸ್ಕರಿಸಲ್ಪಟ್ಟವರಲ್ಲಿ ಕೆಲವರು. ರಾಜಕೀಯ ರಂಗದ ಧುರೀಣರು, ಚಿತ್ರರಂಗದ ಮಹಾಮಹಿಮರು, ಕನ್ನಡ ಸಾಹಿತ್ಯದ ಅಗ್ರಜರು ಮುಂತಾದ ಅತಿಥಿಗಳಿಗೆ ಶ್ರೀಮಠದ ಪರವಾಗಿ ನೆನಪಿನ ಕಾಣಿಕೆಯೊಂದಿಗೆ ಯೋಗ್ಯ ಪುರಸ್ಕಾರ ಸಂದಿದೆ. ವಿದೇಶೀ ಭಕ್ತಾದಿಗಳು, ಕೃಷ್ಣಪಂಥ, ಹರೇರಾಮ್ ತಂಡ ಉಡುಪಿಗಾಗಮಿಸಿ ಶ್ರೀಗಳವರಿಂದ ಫಲಮಂತ್ರಾಕ್ಷತೆ ಪಡೆದು ಅನುಗ್ರಹೀತರಾಗಿದ್ದಾರೆ.

## ಸಪ್ತಮ ಶತಮಾನೋತ್ಸವ

ಶ್ರೀಕೃಷ್ಣ ಪ್ರತಿಷ್ಠಾ ಸಪ್ತಮ ಶತಮಾನೋತ್ಸವವು ಶ್ರೀ ಪೇಜಾವರ ಶ್ರೀಗಳವರ ಪರ್ಯಾಯಾವಧಿಯಲ್ಲೇ ಮೇಳೈಸಿ ಬಂದಿರುವುದು ಅಪೂರ್ವ ಸುಯೋಗ. ೧೯೮೫ ಜನವರಿ ೧೩ – ೧೬ರ ವರೆಗೆ ನಾಲ್ಕು ದಿನಗಳ ಧಾರ್ಮಿಕ-ಸಾಂಸ್ಕೃತಿಕ ಕಾರ್ಯಕ್ರಮಗಳ ಮಹೋತ್ಸವ ಪರ್ಯಾಯದ ಸಂಭ್ರಮವನ್ನೂ ಮೀರಿಸಿತ್ತು. ಮಲ್ಪೆಯ ಕಡಲ ತೀರದಿಂದ ಶ್ರೀಕೃಷ್ಣ - ಮಧ್ವರ ಪ್ರತೀಕಗಳ ವೈಭವಪೂರ್ಣ ಮೆರವಣಿಗೆ – ಹೆಲಿಕಾಪ್ಟರ್ ಪುಷ್ಪವೃಷ್ಟಿ ಅತ್ಯಾಕರ್ಷಣೀಯ. ರಾಜಾಂಗಣದ ಮಧ್ವೇಶಕೃಷ್ಣ ಮಂಟಪದಲ್ಲಿ ಶ್ರೀಕೃಷ್ಣ ಪ್ರತಿಷ್ಠಾಪನೆ – ಉತ್ತರಾದಿ ಮಠದ ಸತ್ಯಪ್ರಮೋದ ತೀರ್ಥರ ಅಧ್ಯಕ್ಷತೆಯಲ್ಲಿ ಧಾರ್ಮಿಕ ಸಮಾರಂಭ ಅಕ್ಷೋಭ್ಯ ಮಠದ ಯತಿಗಳ ಉಪಸ್ಥಿತಿ. ಯತಿವರೇಣ್ಯರ ಉಪನ್ಯಾಸ – ಧಾರ್ಮಿಕ ವಿದ್ವದ್ಗೋಷ್ಠಿ ದಿನವಿಡೀ ಜರುಗಿದ ಕಾರ್ಯಕ್ರಮಗಳು ಚಿರಸ್ಮರಣೀಯ. ಮನರಂಜನೆಯ ಅಂಗವಾಗಿ ಪುತ್ತಿಗೆ ಮಠದ ಶಿಷ್ಯವೃಂದದವರಿಂದ 'ಆನಂದ ಮುಕುಂದ' ನೃತ್ಯರೂಪಕ. ಡಾ। ಪದ್ಮಾ ಸುಬ್ರಹ್ಮಣ್ಯಂ ಅವರ 'ಪುರಂದರ ಭಕ್ತಿ' ಭರತನಾಟ್ಯ, ಭದ್ರಗಿರಿ ಅಚ್ಯುತದಾಸರ ಹರಿಕಥೆ, ಭೀಮಸೇನ ಜೋಶಿ - ಜೇಸುದಾಸ್ ಸಂಗೀತ ಕಚೇರಿ, ಸುಬ್ರಹ್ಮಣ್ಯ - ಎಡನೀರು ಶ್ರೀಗಳ ಭಕ್ತಿ ಸಂಗೀತ ಮುಂತಾದ ಕಾರ್ಯಕ್ರಮಗಳು ಸಪ್ತಮ ಶತಮಾನೋತ್ಸವದ ಉತ್ಕರ್ಷಕ್ಕೆ ಕಾರಣೀಭೂತವಾಯ್ತು. ಪೇಜಾವರ ಶ್ರೀಗಳವರ ದಕ್ಷ ನೇತೃತ್ವದಲ್ಲಿ ಜರುಗಿದ ಸಪ್ತಮ ಶತಮಾನೋತ್ಸವ ಉಡುಪಿಯ ಚಾರಿತ್ರಿಕ ಇತಿಹಾಸದಲ್ಲೇ ಸುವರ್ಣಾಕ್ಷರಗಳಿಂದ ಬರೆಯಲ್ಪಡಬೇಕಾದ ಅತ್ಯಪೂರ್ವ ಉತ್ಸವವೆನಿಸಿದೆ.

## ಅಭಿವೃದ್ಧಿ ಕಾರ್ಯ

ಶ್ರೀ ಪೇಜಾವರ ವಿಶ್ವೇಶತೀರ್ಥರು ಹತ್ತು ಹಲವಾರು ಜನೋಪಯೋಗಿ ಅಭಿವೃದ್ಧಿ ಕಾರ್ಯಗಳನ್ನು ಗುರಿಯಿರಿಸಿಕೊಂಡು ಪರ್ಯಾಯ ಪೀಠಾರೋಹಣ ಮಾಡಿದ್ದಾರೆ. ಕಾರ್ಯಗತವಾದ ಪ್ರಧಾನ ಅಭಿವೃದ್ಧಿಯೆಂದರೆ ಶ್ರೀಕೃಷ್ಣಮಠದ ರಾಜಾಂಗಣಕ್ಕೆ ಹಾಸು ಕಲ್ಲು ಹಾಗೂ ತಗಡು ಹೊದಿಕೆ. ಶ್ರೀಕೃಷ್ಣ ಮಠದ ಧಾರ್ಮಿಕ ಕಾರ್ಯಕಲಾಪಗಳಿಗೆ ವಸಂತ್ ಮಹಲ್ ತೀವ್ರ ಇಕ್ಕಟ್ಟಾಗಿ ಪರಿಣಮಿಸುತ್ತಿದ್ದು ವಿಸ್ತೃತ ಸಭಾಭವನದ ಅವಶ್ಯಕತೆಯಿತ್ತು. ಉಡುಪಿ ನಾಗರಿಕರ ಬಹುದಿನದ ಕನಸು ಪೇಜಾವರ ಶ್ರೀಗಳವರ ಪರ್ಯಾಯಾವಧಿಯಲ್ಲಿ ನನಸಾಗಿ ಪರಿಣಮಿಸಿತು. ಮಳೆಗಾಲವೂ ಸೇರಿದಂತೆ ವರ್ಷವಿಡೀ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಲು ರಾಜಾಂಗಣ ಸಜ್ಜುಗೊಂಡಿದೆ.

ಶ್ರೀಕೃಷ್ಣ ಮಠದ ಒಳಗಿನ ನಾಲ್ಕೂ ಪೌಳಿಗೆ ಕರಿ ನುಣುಪು ಶಿಲೆ ಹೊದಿಸಿ ಕೃಷ್ಣ ಮಠಕ್ಕೆ ಹೊಸ ಕಳೆ ಮೂಡಿಸಲಾಗಿದೆ. ರಾತ್ರಿ ಪೂಜೆಯ ವೇಳೆಯಲ್ಲಿ ದೀಪಾರಾಧನೆಯ ಪ್ರತಿಬಿಂಬ ಈ ಕರಿ ನುಣುಪು ಶಿಲೆಯಲ್ಲಿ ಪ್ರತಿಫಲಿಸಿದಂತಾಗುವುದು. ಶ್ರೀಗಳವರು ಕೈಗೊಂಡ ಶಾಶ್ವತ ರಚನಾತ್ಮಕ ಯೋಜನೆಗಳಲ್ಲಿ

ಇದೂ ಅಡಕವಾಗಿದೆ. ಶ್ರೀಕೃಷ್ಣ ಮಠದ ದ್ವಾರದ ಇಕ್ಕಡೆಗಳ ಜೀರ್ಣಾವಸ್ಥೆಯ ಕೋಣೆಗಳನ್ನು ಕೆಡಹಿ ನವೀಕರಣಗೊಳಿಸಲಾಗಿದೆ.

ಶ್ರೀಕೃಷ್ಣ ಸಪ್ತಮ ಶತಮಾನೋತ್ಸವ ಕಾರ್ಯಕ್ರಮಗಳ ಕೊನೆಯ ದಿನದಂದು ಉಡುಪಿಗಾಗಮಿಸುವ ಭಕ್ತಾದಿಗಳ ಅನುಕೂಲತೆಗಾಗಿ ೧೫ ಲಕ್ಷ ರೂ. ಅಂದಾಜು ವೆಚ್ಚದಲ್ಲಿ ಕಟ್ಟಿಸಲಾಗುವ 'ಸೌಧ'ಕ್ಕೆ ಅದಮಾರು ಶ್ರೀಗಳವರು ಶಿಲಾನ್ಯಾಸಗೈದರು. ಭಕ್ತ ಜನರ ಸಹಾಯ ಸಹಕಾರದ ನೆರವಿನಿಂದ ಆದಷ್ಟು ತ್ವರಿತವಾಗಿ ಸೌಧವನ್ನು ಪೂರ್ಣಗೊಳಿಸಿ ಭಕ್ತಾದಿಗಳ ಅನುಕೂಲತೆಗಾಗಿ ಸಮರ್ಪಿಸುವ ಅಭಿಲಾಷೆ ಶ್ರೀ ವಿಶ್ವೇಶತೀರ್ಥರದ್ದು.

ಶ್ರೀಕೃಷ್ಣನ ನೆಲೆಯಲ್ಲಿ ಅನಾಥ ಬಾಲಕರ ರಕ್ಷಣಾಕೇಂದ್ರ ಸ್ಥಾಪನೆ, ಉಡುಪಿಯ ಉಚಿತ ಚಿಕಿತ್ಸಾಲಯದ ಅಭಿವೃದ್ಧಿ, ಉಡುಪಿ ಪರಿಸರದಲ್ಲಿ ಗೋಕೇಂದ್ರ ಸ್ಥಾಪನೆ, ಶ್ರೀಕೃಷ್ಣ ಮಠದ ಸರ್ವಾಂಗೀಣ ಅಭಿವೃದ್ಧಿ ಮುಂತಾದ ಯೋಜನೆಗಳನ್ನು ಗುರಿಯಿರಿಸಿಕೊಂಡ ಧೀರೋದಾತ್ತ ವ್ಯಕ್ತಿತ್ವದ ಶ್ರೀ ಪೇಜಾವರ ಶ್ರೀಗಳವರು ೧೯೮೪ ಜನವರಿ ೧೮ರಂದು ತನ್ನ ಪರ್ಯಾಯಾಧಿಕಾರವನ್ನು ಪಲಿಮಾರು ಶ್ರೀಗಳವರಿಗೆ ಹಸ್ತಾಂತರಿಸಲಿರುವರು. ಹಿಂದೆಂದೂ ಯಾವ ಪರ್ಯಾಯಾವಧಿಯಲ್ಲೂ ಶ್ರೀಕೃಷ್ಣ ಮಠದಲ್ಲಿ ಜರಗಿರದಂತಹ ಅಪೂರ್ವ ಅನವರತ ಧಾರ್ಮಿಕ – ರಚನಾತ್ಮಕ ಕಾರ್ಯಗಳು ಶ್ರೀ ವಿಶ್ವೇಶತೀರ್ಥರ ತೃತೀಯ ಪರ್ಯಾಯಾವಧಿಯಲ್ಲಿ ಕಾರ್ಯಗತವಾಗಿವೆ. ಬ್ರಹ್ಮ ತೇಜಸ್ಸಿನ, ತುಂಬು ಲವಲವಿಕೆಯ, ನಿರ್ಮಲ ಚಿತ್ತದ ಸರಳ ಸೌಜನ್ಯದ ಸಾಕಾರ ಮೂರ್ತಿ ಶ್ರೀ ವಿಶ್ವೇಶತೀರ್ಥರಿಂದ ಶ್ರೀಕೃಷ್ಣ ಮಠ ಮತ್ತು ಉಡುಪಿ ಇನ್ನೂ ಅಭಿವೃದ್ಧಿಯತ್ತ ಸಾಗಲಿ. ಶ್ರೀಕೃಷ್ಣ ಅವರಿಗೆ ಶಕ್ತಿ ಸಾಮರ್ಥ್ಯವನ್ನಿತ್ತು ಅನುಗ್ರಹಿಸಲೆಂದು ನಮ್ಮೆಲ್ಲರ ಹರಕೆ.

**('ಗೌರವ' ಸಂ. – ಕೊಡತ್ತೂರು ಅನಂತ ಪದ್ಮನಾಭ ಉಡುಪ, ೧೯೮೬, ಕಿನ್ನಿಗೋಳಿ)**

●

೪-೩

# ಯತಿ - ಪೀಠಾಧಿಪತಿಯ ಪರ್ಯಾಯವಿದು

ಆಚಾರ್ಯ ಮಧ್ವರು ಉಡುಪಿಯಲ್ಲಿ ಶ್ರೀಕೃಷ್ಣನ ಮೂರ್ತಕಲ್ಪನೆಯನ್ನು ಸ್ಫೂರ್ತಿಯ ಕೇಂದ್ರ ಶಕ್ತಿಯಾಗಿ ಬಳಸಿಕೊಂಡು ಸುಮಾರು ೭೦೦ ವರ್ಷಗಳ ಹಿಂದೆ ''ಯತಿ ಪೀಠಾಧಿಪತಿ''ಯ ಸಂಸ್ಥಾನವೊಂದನ್ನು ಸ್ಥಾಪಿಸಿದ ಉದ್ದೇಶ ದ್ವಿಮುಖಿಯಾಗಿರಬೇಕೆಂದು ನನಗನ್ನಿಸುತ್ತದೆ. ಮೇಲ್ನೋಟಕ್ಕೆ ಪಾರಮಾರ್ಥಿಕ – ಅಂದರೆ ವ್ಯಕ್ತಿತ್ವದ ಮಟ್ಟದ ಆಂತರಿಕ ವಿಕಸನ – ಉದ್ದೀಪನವೆಂದು ಕಂಡರೂ ವಸ್ತುತಃ ಇದರೊಡನೆ ಇನ್ನೊಂದು ಸಾಮಾಜಿಕ ಉದ್ದೇಶವು ಒಳಗೊಂಡಿದೆಯೆಂದೆನ್ನಿಸುತ್ತದೆ. ಧರ್ಮಪೀಠದ ಕೇಂದ್ರವೊಂದರ ಮೂಲಕ ಪ್ರಾಚೀನ ದೇಸೀ ಜನಾಂಗದ ಅಸಂಸ್ಕೃತ - ಅಜ್ಞಾನ - ಮೂಲವಾದ 'ಕಿರುಪರಂಪರೆ' ಗಳ (Little Tradition) ಮೇಲೆ ವೇದೋಪನಿಷತ್ತಿನ ಸಮಗ್ರ ಜ್ಞಾನ, ಪೂರ್ಣಪ್ರಜ್ಞಾಜನ್ಯ ಮೌಲ್ಯಗಳ ಸಾರದಿಂದ ಬೆಳೆಸಿದ ಮಹಾಪರಂಪರೆಯ (Great Tradition) 'ಸಮಗ್ರ ಸಂಸ್ಕೃತಿ'ಯ ಸಮಾಜವನ್ನು ಬೆಳೆಸುವುದು. ಪ್ರಾಚೀನ ಜನಾಂಗಗಳ ದೇಶೀಯ ಕಿರು ಪರಂಪರೆಗಳು ೧) ಜೈವಿಕ, ಭೌತಿಕ ಮತ್ತು ೨) ಮಾನಸಿಕ ಸಾಮಾಜಿಕ ಆಯಾಮಗಳನ್ನು ಮಾತ್ರ ಒಳಗೊಂಡದ್ದು. ಆದರೆ ಸಮಗ್ರ ಸಂಸ್ಕೃತಿಯು ಇದರೊಡನೆ 'ಆದರ್ಶ-ಆಧ್ಯಾತ್ಮಿಕ' (ideal transcendental) ಎನ್ನುವ ಮೂರನೆಯ ಆಯಾಮವನ್ನೊಳಗೊಂಡು ಬದುಕಿನ ಪರಿಪೂರ್ಣತೆಯು ಅದರ ಗುರಿಯಾಗಿರುತ್ತದೆ. ಜೈವಿಕ - ಭೌತಿಕ ಬದುಕಿನ ರಕ್ಷಣೆ. ಭಯನಿವಾರಣೆಯು ಈ ಪ್ರಾಚೀನ ದೇಶೀಯ ಕಿರುಪರಂಪರೆಯ ಮೌಲ್ಯವಾದರೆ ಆಧುನಿಕ ನಾಗರಿಕತೆಯು ಇದರಂತೆಯೇ – ಆದರೆ, ಸ್ವಲ್ಪ ವ್ಯತ್ಯಾಸದೊಡನೆ – ಜೈವಿಕ ಭೌತಿಕ ಜೀವನ ಭದ್ರತೆ ಮತ್ತು ಸಮೃದ್ಧಿಯ ಕಡೆಗೆ ಅಭಿಮುಖವಾಗಿದೆ. ಆದರೆ ಸಮಗ್ರ ಸಂಸ್ಕೃತಿಯ ಪರಿಕಲ್ಪನೆಯು ಮಾತ್ರ ಹೆಚ್ಚು ಮಾನವೀಯವಾದ ಬದುಕಿನ ಸಮಗ್ರ ದೃಷ್ಟಿಯ ಕಡೆಗೆ ಮಹತ್ವ ನೀಡುವುದು. ವೇದಾಂತದಲ್ಲಿ ಅಭಿವ್ಯಕ್ತವಾಗುವ ಈ ಸಮಗ್ರ ಸಂಸ್ಕೃತಿಯೇ ಭಾರತದ 'ಮಹಾ ಪರಂಪರೆ' – ಭಾರತೀಯ ಸಂಸ್ಕೃತಿ.

ಯಾವತ್ತೂ ರಾಜಕೀಯ ಗೊಂದಲದಲ್ಲೇ ಸಾಗಿ ಬಂದ ಭಾರತದ ಸಾಮಾಜಿಕ ಜೀವನದಲ್ಲಿ ಯತಿ-ಪೀಠಾಧಿಪತ್ಯದ ಪಾತ್ರವು ಮಹತ್ವಪೂರ್ಣವಾದದ್ದು. ಇದಷ್ಟರ ಅಗತ್ಯವನ್ನು ಗುರುತಿಸಿದವರು ಶಂಕರಾಚಾರ್ಯರು. ತ್ಯಾಗ-ಅಪರಿಗ್ರಹ-ಆತ್ಮಶುದ್ಧಿಯ ಯತಿಯೊಬ್ಬನು ಸಮಾಜದ ಗುರುಪೀಠವೇರಿ ಸಮಾಜದ ನಿಯಂತ್ರಣ, ಮಾರ್ಗದರ್ಶನದ ಸೂತ್ರದ ಅಧಿಕಾರ ವಹಿಸಬೇಕು. ಭಾರತದ ಕಳೆದ ಒಂದೂವರೆ ಸಾವಿರ ವರ್ಷಗಳಿಂದ ರಾಜಕೀಯವು ನಿರಂತರ ಆಕ್ರಮಣಜನ್ಯ ಅಭದ್ರ ಸ್ಥಿತಿಯಲ್ಲೇ

ಸಾಗಿದ್ದು, ಸಮಾಜ-ಸಂಸ್ಕೃತಿಯ ರಕ್ಷಣೆಯ ಹೊಣೆಗಾರಿಕೆಯನ್ನು ಧರ್ಮಪೀಠವೇ ಹೊತ್ತು ನಡೆದಿದ್ದುದನ್ನು ನಾವು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಆಚಾರ್ಯ ಮಧ್ವರ ಪೀಠಸ್ಥಾಪನೆಯ ಉದ್ದೇಶ ಗುರುತಿಸಬೇಕಾಗಿದೆ ನಾವು. ಅದು ಕೇವಲ ಆಧ್ಯಾತ್ಮಿಕವಲ್ಲ. ಸಾಮಾಜಿಕವೂ ಆಗಿತ್ತು. ಯತಿ - ಪೀಠಾಧಿಪತ್ಯದ ಉದ್ದೇಶ-ಒಬ್ಬ 'ದಾರ್ಶನಿಕ-ರಾಜ' ಸಂಸ್ಥೆಯನ್ನು, ಸಮಾಜದ ಭದ್ರತೆ ಮತ್ತು ಆರೋಗ್ಯ ಹಾಗೂ ಸಂಸ್ಕೃತಿಯ ರಕ್ಷಣೆಗಾಗಿ ಬೆಳೆಸುವುದು.

ಈ ದ್ವಿಮುಖೀ ಉದ್ದೇಶವನ್ನು ಹಿಂದಕ್ಕೆ ಶ್ರೀ ವಾದಿರಾಜರು ಸಮರ್ಥವಾಗಿ ನೆರವೇರಿಸಿ ಇತಿಹಾಸದ ದಾಖಲೆ ನಿರ್ಮಿಸಿದ್ದರು. ಆಗಿನ ಕಾಲಕ್ಕೆ ಸಮರ್ಪಕವಾದ ರೀತಿಯಲ್ಲಿ ಕಾರ್ಯ ನಿರ್ವಹಿಸಿ ಇಂದಿನ ಪರ್ಯಾಯ ಪೀಠಾಧಿಪತಿಗಳು ಇದನ್ನು ಗುರುತಿಸಿ ನಡೆದರೆ ಮಾತ್ರ ಅವರ ಅಸ್ತಿತ್ವಕ್ಕೆ ಅರ್ಥವಿರುವುದು. ಇವರು ಮುಂದುವರಿಯುವ ಹಕ್ಕು ಕೇವಲ 'ಆಚಾರ್ಯ ಮಧ್ವರು ಸ್ಥಾಪಿಸಿದ್ದು' ಎಂಬಿಷ್ಟರ ಮೇಲೆಯೇ ನಿಂತಿರಲು ಸಾಧ್ಯವಿಲ್ಲ. 'ಇಂದಿಗೆ ಎಷ್ಟು ಪ್ರಯೋಜನಕಾರಿ ?' ಎಂಬುದನ್ನು ಅದು ಅವಲಂಬಿಸಿದೆ.

ಸಾಮಾಜಿಕವಾಗಿ ವಾದಿರಾಜರ ಕಾಲದ ಅನಂತರ ಭಾರತದಾದ್ಯಂತ ಅತ್ಯಂತ ಚೈತನ್ಯಪೂರ್ಣ ಯತಿ-ಪೀಠಾಧಿಪತಿಯಾಗಿ ಗುರುತಿಸಲ್ಪಡುವ ಒಬ್ಬ ಯತಿಯೆಂದರೆ ಅದು ಪೇಜಾವರ ಶ್ರೀಗಳವರು. ಅವರ ಕಳೆದೆರಡು ವರ್ಷಗಳ ಪೀಠನಿರ್ವಹಣೆಯ ವಿಮರ್ಶೆಯಿಂದು ಸಾಮಯಿಕ.

'ಯತಿ'ಯ ಪರಿಕಲ್ಪನೆಗೆ ಎಳ್ಳಷ್ಟೂ ಅಪಚಾರವೆಸಗದೆ, ಅಪರಿಗ್ರಹ, ಪರಾಭಿಮುಖ ಜೀವನದ ಮೂಲಕ ಮಧ್ವರ ಮೊದಲ ಉದ್ದೇಶವನ್ನು ಸಾರ್ಥಕವಾಗಿಸಿದ್ದಾರೆ. ಎರಡನೆಯ ಸಾಮಾಜಿಕ ಉದ್ದೇಶವನ್ನು ಈ ಪರ್ಯಾಯ ಕಾಲದಲ್ಲಿ ಯಾವ ರೀತಿಯಲ್ಲಿ ಈಗಿನ ಇತಿ-ಮಿತಿಯ ಪರಿಸರದಲ್ಲಿ ಅವರು ಔಚಿತ್ಯಪೂರ್ಣವಾಗಿ ಸಾಧಿಸಲು ಪ್ರಯತ್ನಿಸಿದ್ದಾರೆನ್ನುವುದು ಗಮನಾರ್ಹ. ಅವರು ಹಮ್ಮಿಕೊಂಡ ಕಾರ್ಯಕ್ರಮಗಳ ಮೂಲಕ ನಾವಿದನ್ನು ಗಮನಿಸಬೇಕು.

ಗೊತ್ತುಗುರಿಯಿಲ್ಲದ ಆಧುನಿಕ ಜನತೆಯ ಭೂನಿಷ್ಠ - ಭೋಗನಿಷ್ಠ ಜೀವನವನ್ನು, ಅತ್ಯಂತ ನೀಳವಾದ ಬಿಗಿತವೆಂದನ್ನಿಸದ ಧರ್ಮಸೂತ್ರವೊಂದರ ಮೂಲಕ ಆಧ್ಯಾತ್ಮಿಕ ಗೂಟಕ್ಕೆ ಕಟ್ಟಿ, ಈ ಜೀವನವು ಪೂರ್ಣವಾಗಿ ಮೌಲ್ಯಗಳ ಪರಿಧಿಗಿಂತ ಹೊರ ಹೋಗಲೆತ್ನಿಸಿದಾಗ ಮಾತ್ರ ಬಿಗಿತದ ಅನುಭವವಾಗುವಂತೆ ಸಮಾಜದಲ್ಲಿ ಹಿತವನ್ನು ಸಾಧಿಸುವುದೇ ಯತಿಯ ಜಾಣತನ. ಇದರ ಮೊದಲ ಹೆಜ್ಜೆಯಾಗಿ ಜನತೆಯು ತನ್ನೆಡೆಗೆ ಸಹಜವಾಗಿ ಆಕರ್ಷಿತರಾಗುವ ಪ್ರೇಮ -ವಾತ್ಸಲ್ಯದ 'ಮಾತೃ ಪ್ರತಿಮೆ'ಯ ವ್ಯಕ್ತಿತ್ವ ಹಾಗೂ ಆಕರ್ಷಕ ಕಾರ್ಯಕ್ರಮಗಳ ಸಂಯೋಜನೆ. ಇವುಗಳ ಬೆಳೆಸುವಿಕೆ. ಎರಡನೆಯದಾಗಿ ಅವರ ಮೇಲೆ ತನ್ನ ವರ್ಚಸ್ಸನ್ನು ಬೀರಿ, ಅವರು ಸಂಪಾದಿಸಿದ ಸಂಪತ್ತು, ಧೀಶಕ್ತಿ, ವಿದ್ವತ್ತು, ಅಧಿಕಾರ - ಇವೆಲ್ಲವನ್ನೂ ಜನತೆಯ ಪ್ರಯೋಜನಕ್ಕಾಗಿ ವಿನಿಯೋಗಿಸುವಂತೆ, ಅದು ಅರ್ಥಹೀನ ಕ್ಷೇತ್ರದಲ್ಲಿ ವ್ಯಯವಾಗದಂತೆ ಪ್ರೇರಣೆಯ ಮೊಳಿಕೆಯಾಗುವಂತೆ ಮಾಡುವುದು. ಇಷ್ಟೆಲ್ಲ ವ್ಯಕ್ತಿಗಳಿಗೆ ಕೃಷ್ಣಾನುಗ್ರಹ ಪ್ರದಾನವನ್ನೇಕೆ ಇವರು ಮಾಡಿದರು? ಅನ್ನುವುದಕ್ಕೆ ಅರ್ಥ, 'ಕೃಷ್ಣನು ಅನುಗ್ರಹಿಸುವ ರೀತಿಯಲ್ಲಿ ನಿಮ್ಮ ನಿಮ್ಮ ಸಾಮರ್ಥ್ಯವನ್ನು ಸಮಾಜ ಕಲ್ಯಾಣಕ್ಕೆ ಅಚ್ಯುತಾತ್ಮತ್ವದೆಡೆಗೆ ವಿನಿಯೋಗಿಸಿ' ಎಂಬುದೇ ಇರಬೇಕು. ಅರ್ಥ ಮಾಡಿಕೊಂಡವರು ಸಾರ್ಥಕರಾಗುತ್ತಾರೆ.

ಸಮ್ಯಗ್ ದೃಷ್ಟಿಯ ಯತಿಗೆ ಯೋಗ್ಯವಾದ ಸಮಾಜದಲ್ಲಿ ಸರ್ವಸಮತಾ ಭಾವದಿಂದ ಪರ್ಯಾಯಾವಧಿಯಾದ್ಯಂತ ನಡೆಯುವುದು ಹೇಗೆಂಬುದನ್ನೂ ಇತರ ಪೀಠಾಧಿಪತಿಗಳು ಅನುಕರಿಸುವಂತೆ ನಿದರ್ಶನವಿತ್ತಿದ್ದಾರೆ. ಇಂದಿನ ನಮ್ಮ ಸಮಾಜವು ಅನೇಕ ಮತಗಳ, ಅನೇಕ ಸಿದ್ಧಾಂತಗಳ ಬಹುಪಂಥೀಯ ಸಮಾಜ. ಎಲ್ಲ ಮತಗಳವರನ್ನೂ ಸಮಾನವಾಗಿ ಆತ್ಮೀಯತೆಯಿಂದ ಕಾಣುವುದೇ ಇಂದಿಗೆ ತೀರ ಅಗತ್ಯದ

ಧೋರಣೆ, ವೇದಕಾಲದ 'ಧರ್ಮ'ದ ಕಲ್ಪನೆಗೆ ಒಪ್ಪುವ, 'ವಸುಧೈವ ಕುಟುಂಬಕ' ಭಾವ ಇಂದಿನ ಧಾರ್ಮಿಕತೆಯ ಜೀವಸತ್ವವಾಗಬೇಕು. ಶೃಂಗೇರಿ, ರಾಮಚಂದ್ರಾಪುರ ಮುಂತಾದ ಮಾಧ್ವೇತರ ಪೀಠಾಧಿಪತಿಗಳು, ದ್ವೈತದ ಇನ್ನೊಂದು ಪ್ರತ್ಯೇಕ ಶಾಖೆಯಾಗಿ ಉಡುಪಿಯೊಡನೆ ಪರಸ್ಪರ ಸಂಪರ್ಕ ವಿರದೆ ಸಾಗಿದ ಉತ್ತರಾದಿ ಪೀಠದವರು, ಅನೇಕ ವೀರಶೈವ ಪೀಠಸ್ಥರು – ಮಾತ್ರವಲ್ಲ ಮುಸಲ್ಮಾನ, ಕ್ರೈಸ್ತ ಧಾರ್ಮಿಕ ವಿದ್ವಾಂಸರು, ಸಮಾಜ ಪ್ರಮುಖರು – ಇವರೆಲ್ಲರೂ ಪೇಜಾವರ ಶ್ರೀಗಳ ಆತ್ಮೀಯತೆಗೆ ಮಾರುಹೋಗಿ, ಉಡುಪಿಗೆ ಸಂದರ್ಶನವಿತ್ತಿದ್ದಾರೆ. ಒಡೆಯುತ್ತಿರುವ ಸಮಾಜವನ್ನು ಮತ್ತೆ ಒಂದುಗೂಡಿಸುವ ಚೈತನ್ಯ ಇಲ್ಲಿ ಮೂಡಿಬರಬೇಕು. ಗುರುವಾಯೂರಿನ ಕೃಷ್ಣನ ದರ್ಶನಕ್ಕೆ ಬಾಹಿರನಾದ ಪ್ರಸಿದ್ಧ ಗಾನಯೋಗಿ ಜೇಸುದಾಸನಿಗೆ ಪ್ರೀತಿಯಿಂದ ಕರೆದು ಉಡುಪಿ ಕೃಷ್ಣನ ಬಾಗಿಲನ್ನು ತೆರೆಯೊಡ್ಡಿದ್ದಾರೆ. ಇವೆಲ್ಲವೂ ಸಂಪ್ರದಾಯದ ಸಂಕುಚಿತತೆ, ವಿಕಾರಗಳ ಬಿಗಿತದಿಂದ ನಮ್ಮ ಧರ್ಮ - ಸಂಸ್ಕೃತಿಗಳನ್ನು ಬಿಡಿಸುವ ಸಾಂಕೇತಿಕ ಹೆಜ್ಜೆಗಳು. ಇದು ಕೇವಲ 'ಮಾಧ್ವ-ಬ್ರಾಹ್ಮಣ' ಪೀಠವಲ್ಲ, ಭಾರತೀಯ ಧರ್ಮವಾಹಿನಿಯನ್ನು ಸಗರಸಮಾಜದ ಮೇಲೆ ಹರಿಸುವ ಭಗೀರಥಯತ್ನ ಪೀಠವೆಂದು ಭಾರತದ ಧರ್ಮ ಮಹಾಂತರ ಸಮ್ಮೇಳನ ನಡೆಸಲು ವೇದಿಕೆಯೊದಗಿಸಿ ತೋರಿಸಿಕೊಟ್ಟಿದ್ದಾರೆ. 'ವಸುಧೈವ ಕುಟುಂಬದ' ಸಂಕೇತ 'ವಾಸುದೇವ-ಕೃಷ್ಣ'ನ ಕಲ್ಪನೆಗೆ ಸೂಕ್ತವಾದ ಹೆಜ್ಜೆಯಿದು.

ಸಾಮಾಜಿಕ-ಸಾಂಸ್ಕೃತಿಕ-ವೈಜ್ಞಾನಿಕ ಆಯಾಮದಲ್ಲೂ ಸಮ್ಯಕ್ ದೃಷ್ಟಿಪ್ರೇರಿತ ಅನೇಕ ಕಾರ್ಯಗಳು ಅತ್ಯಂತ ಆಂದೋಲನಕಾರೀ ವಿಚಾರದ ಪೋಲಂಕಿಯಿಂದ ಹಿಡಿದು, ಡಾ। ಯು. ಆರ್. ಅನಂತಮೂರ್ತಿಯ ಜವಾಬ್ದಾರಿಯುತ 'ಆಂತರಿಕ - ವಿಮರ್ಶಕ', ಡಾ। ಭೈರಪ್ಪನವರ 'ಪಾವನ' ಪ್ರಜ್ಞೆಯ ಧರ್ಮವಿಮರ್ಶೆ, ರಂ. ಶ್ರೀ ಮುಗುಳಿಯವರ 'ಧರ್ಮವೇ ಆತ್ಮ'ವಾಗಿರುವ ಸಾಹಿತ್ಯ ವಿಮರ್ಶೆ, ಶೇಷಗಿರಿರಾಯರ 'ಧರ್ಮ ಮತ್ತು ಸಾಹಿತ್ಯ' – ಇತ್ಯಾದಿ ಅನೇಕ ಗಂಭೀರ ಚಿಂತನೆಗೂ ವೇದಿಕೆಯಿತ್ತು ಧರ್ಮವು ವೈಚಾರಿಕತೆಗೆ ವಿರೋಧಿಯಲ್ಲ. ವೈಚಾರಿಕತೆಯಲ್ಲೇ ಅದೇ ಬೆಳೆದು ಬದುಕಬೇಕೆಂದು ತೋರಿಸಿಕೊಟ್ಟಿದ್ದಾರೆ. ಡಾ। ವಿ. ಕೆ. ಆರ್. ವಿ. ರಾಯರ ವೇದಾಂತದಲ್ಲಡಕವಾದ ಸಮಾಜವಾದವನ್ನು ತಿಳಿಯುವ, ಭಾರತದ ಅತ್ಯಂತ ಶ್ರೇಷ್ಠ ವಿಜ್ಞಾನಿಗಳಲ್ಲೊಬ್ಬರಾದ ಡಾ। ಸಿ. ಎನ್. ಆರ್. ರಾಯರ ವಿಜ್ಞಾನದ ಮೂಲಕ ವಿಶ್ವದ ಸತ್ಯವನ್ನು ಅರಿಯುವ ಅವಕಾಶವನ್ನೂ ಈ ಪೀಠದಿಂದಲೇ ಒದಗಿಸಿದ್ದಾರೆ.

ಹಿಂದೂಸ್ಥಾನೀ ಮತ್ತು ದಕ್ಷಿಣಾದಿ ಪ್ರಕಾರದ ಶ್ರೇಷ್ಠ ಸಂಗೀತಗಾರರಿಗೆ, ಶ್ರೇಷ್ಠ ನೃತ್ಯ ಪರಂಪರೆ ಗಳಿಗೆ, ಶ್ರೇಷ್ಠ ಜಾನಪದ - ಯಕ್ಷಗಾನ ಕಲೆಗಳಿಗೂ ಪ್ರದರ್ಶನ ವೇದಿಕೆಯಾಗಿತ್ತು ಇವರ ಪೀಠ.

ವೈಚಾರಿಕತೆಯ, ಕಲಾಮಾಧ್ಯಮಗಳ ಎಲ್ಲ ಪ್ರಕಾರಗಳಿಗೂ ಇಲ್ಲಿ ಸ್ವಾಗತವಿತ್ತು. ಒಟ್ಟು ಧರ್ಮ ಪೀಠವು ಒಬ್ಬ ಶ್ರೇಷ್ಠ 'ರಾಜಯೋಗಿ'ಯ ಪೀಠದ ನೆನಪನ್ನು ತಂದುಕೊಡುವಂತಿತ್ತು. ಇವರ ಅವಧಿಯಲ್ಲಿ ಮಾನವೀಯವಾದ 'ಸಮಗ್ರ ಸಂಸ್ಕೃತಿ'ಯ ವಿಸ್ಮೃತಿಯಿಲ್ಲದೆ ಈ ಅವಧಿಯನ್ನು 'ಪೂರ್ಣಪ್ರಜ್ಞ ಪೀಠ'ದ ಕಲ್ಪನೆಗೆ ಅನುಚಿತವಾಗದಂತೆ ಸಾರ್ಥಕಗೊಳಿಸಬೇಕೆಂಬ ಹಂಬಲವೇ ಇವೆಲ್ಲದರ ಹಿಂದಿನ ಚೈತನ್ಯ ವಾಗಿತ್ತಲ್ಲವೆ ?

ಇವರ ಅನಂತರದವರಿಗೆ ಇದೊಂದು ಪಂಥಾಹ್ವಾನ. ಇವರು ನಡೆದ ದಾರಿ, ಹಾಕಿಕೊಟ್ಟ ಪಥ ಮುಂದುವರಿಯಲಿ – ಎಂದು ಹಾರೈಸುತ್ತೇವೆ.

('ತ್ರಿವಿಕ್ರಮ', ಪೇಜಾವರ ಮಠ, ಉಡುಪಿ - ೯೮೪)

●

# ಶ್ರೀ ವಿಶ್ವೇಶತೀರ್ಥರ ಪರ್ಯಾಯ – ನಿತ್ಯೋತ್ಸವ

## ಪೇಜಾವರ ಶ್ರೀಗಳವರ ೧೯೮೪–೮೬ರ ಪರ್ಯಾಯಾವಸರದಲ್ಲಿ ನಿತ್ಯ ನಿರಂತರವೆಂಬಂತೆ ನೆರವೇರಿದ ಸತ್ಕಾರ್ಯಕ್ರಮಗಳು

| | ಸಂಗೀತ ಕಚೇರಿ | ಶ್ರೀಗಳಾದ |
|---|---|---|
| ೧೬-೨-೮೪ | ದೇವರನಾಮ | – ಜಯತೀರ್ಥ ಆಚಾರ್ಯ |
| ೧೮-೨-೮೪ | ಕಾವ್ಯವಾಚನ | – ಯಮ್. ಎಸ್. ಗೋಪಾಲ, ಬೆಂಗಳೂರು |
| ೧೯-೨-೮೪ | ಗಾಯನ ಕಚೇರಿ | – ಹೊನ್ನಪ್ಪ ಭಾಗವತರ್ |
| ೨೫-೨-೮೪ | ಜಪಾನೀ ವಾದ್ಯವಾದನ | – ಎ. ಸುಬ್ಬರಾವ್, ಮಡಿಕೇರಿ |
| ೪-೩-೮೪ | ಗಾಯನ ಕಚೇರಿ | – ಕುರುಡಿ ವೆಂಕಣ್ಣಾಚಾರ್ಯ |
| ೧೧-೩-೮೪ | ,, ,, | – ಶ್ರೀಮತಿ ರಾಜ್ಯಲಕ್ಷ್ಮಿ |
| ೧೯-೩-೮೪ | ,, ,, | – ಟಿ. ವಿ. ಗೋಪಾಲಕೃಷ್ಣನ್ |
| ೨೦-೩-೮೪ | ಕೊಳಲು ವಾದನ | – ಪ್ರಪಂಚಂ ಸೀತಾರಾಮ್ |
| ೨೨-೩-೮೪ | ಗಾಯನ ಕಚೇರಿ | – ರಾಜಪ್ಪ, ಮೈಸೂರು |
| ೨೪-೩-೮೪ | ಹಾಡುಗಾರಿಕೆ | – ರಘುರಾಮ ಅಯ್ಯಂಗಾರ್ |
| ೨೫-೩-೮೪ | ,, | – ಶ್ರೀಮತಿ ಚಂಪಕಾ ಮತ್ತು ಪಾರ್ಟಿ |
| ೨೯-೩-೮೪ | ,, | – ರಥಬೀದಿ ಗೆಳೆಯರಿಂದ |
| ೫-೪-೮೪ | ,, | – ಶ್ರೀಮತಿ ವಿಜಯಲಕ್ಷ್ಮಿ, ಬೆಂಗಳೂರು |
| ೧೧-೪-೮೪ | ,, | – ಕುಮಾರಿ ಸುಚೇತಾ |
| ೧೯-೪-೮೪ | ,, | – ಚಕ್ರಕೋಡಿ ನಾರಾಯಣ ಶಾಸ್ತ್ರಿ |
| ೨೦-೪-೮೪ | ಕೊಳಲುವಾದನ | – ಪ್ರಪಂಚಂ ಸೀತಾರಾಮ್ |
| ೩೦-೪-೮೪ | ಸಂಗೀತ | – ಉಮಾ ನಾಗಭೂಷಣ ರಾವ್ |
| ೪-೫-೮೪ | ದೇವರನಾಮ | – ಎಚ್. ಎನ್. ರಾಘವೇಂದ್ರ, ಗರ್ತಿಕೆರೆ |
| ೬-೫-೮೪ | ಹಾಡುಗಾರಿಕೆ | – ಕೆ. ವಿದ್ಯಾ, ಕೆ. ಗಾನಸರಸ್ವತಿ, ಶಿವಮೊಗ್ಗ |

| | | | |
|---|---|---|---|
| ೮-೫-೮೪ | ವೀಣಾವಾದನ | – | ಆಲಮೇಲು ಶಾರದಾ |
| ೧೦-೫-೮೪ | ದೇವರನಾಮ | – | ಕರುಣಾಕರ, ಬೆಂಗಳೂರು |
| ೧೪-೫-೮೪ | ಗಾಯನ ಕಚೇರಿ | – | ಡಾ। ಎಂ. ಬಾಲಮುರಲೀಕೃಷ್ಣ ಮತ್ತು ಬಳಗ |
| ೧೪-೫-೮೪ | ಕೊಳಲು ವಾದನ | – | ಬಸವರಾಜು ಮತ್ತು ಸಹೋದರರು, ಮದ್ರಾಸು |
| ೧೫-೫-೮೪ | ದೇವರನಾಮ | – | ಇಂದಿರಾ ರಾಮಚಂದ್ರ |
| ೧-೬-೮೪ | ಸಂಗೀತ | – | ವಾರಿಜಾಕ್ಷಿ |
| ೨-೬-೮೪ | ,, | – | ಕೃಷ್ಣ ಅಯ್ಯರ್ |
| ೮-೬-೮೪ | ಭಜನೆ | – | ಭಕ್ತವೃಂದ, ಬಳ್ಳಾರಿ |
| ೧೦-೬-೮೪ | ಸಂಗೀತ | – | ಶ್ರೀಮತಿ ವಸುಂಧರಾ, ಶಿವಮೊಗ್ಗ<br>ನಂಜುಂಡ ಸ್ವಾಮಿ, ಮೈಸೂರು |
| ೧೧-೬-೮೪ | ,, | – | ಸಿ. ಆರ್. ಪದ್ಮಾ, ಮೂಲ್ಕಿ |
| ೧೨-೬-೮೪ | ,, | – | ಲಿಂಗಯ್ಯ , ಮಂಡ್ಯ |
| ೧೫-೭-೮೪ | ಹಾಡುಗಾರಿಕೆ | – | ರಘುರಾಮ ಅಯ್ಯಂಗಾರ್ |
| ೪-೮-೮೪ | ಭಜನೆ | – | ಕಣ್ಣನ್ ಅಯ್ಯಂಗಾರ್, ಕಲ್ಲಿಕೋಟೆ |
| ೪-೮-೮೪ | ವೀಣಾವಾದನ | – | ಯೋಗೀಶ ಕೊಡಂಚ |
| ೧೬-೮-೮೪ | ಭಕ್ತಿಗೀತೆ | – | ಎಚ್. ರಾಘವೇಂದ್ರ ರಾವ್, ಮಂಗಳೂರು |
| ೧೯-೮-೮೪ | ವೇಣುಗಾನ | – | ಡಾ। ಪ್ರಪಂಚಂ ಸೀತಾರಾಮ್ |
| ೩೦-೮-೮೪ | ಹಾಡುಗಾರಿಕೆ | – | ದಾಸ ಸಂಗೀತವಿಶಾರದ ವಾಸುದೇವ ಭಟ್ಟ |
| ೩-೯-೮೪ | ,, | – | ಸಿ. ವಿ. ಭಾನುಮತಿ ಮತ್ತು ಸಿ. ವಿ. ಗಿರಿಜಾ,<br>ಕೊಯಮತ್ತೂರು |
| ೧೬-೧೦-೮೪ | ಸಂಗೀತ ಕಚೇರಿ | – | ಅರವಿಂದ ಹುಯಿಲಗೋಳ |
| ೨೦-೧೦-೮೪ | ಕೊಳಲುವಾದನ | – | ಸಿಕ್ಕಲ್ ಸಹೋದರಿಯರಿಂದ |
| ೩-೧೧-೮೪ | ದೇವರನಾಮ | – | ಶೇಖರ - ಗಣೇಶ |
| ೨೦-೧೧-೮೪ | ಕಾವ್ಯವಾಚನ | – | ಸಿ. ವಿ. ಶ್ರೀನಿವಾಸ ಆಚಾರ್, ಮೈಸೂರು |
| ೨೫-೧೧-೮೪ | ಕರ್ನಾಟಕ ಸಂಗೀತ | – | ಮಾಸ್ಟರ್ ರಾಮಪ್ರಸಾದ ರಾವ್ |
| ೨೬-೧೧-೮೪ | ಹಾಡುಗಾರಿಕೆ | – | ಸಿ. ಕೃಷ್ಣಮೂರ್ತಿ, ಮೈಸೂರು |
| ೨೯-೧೧-೮೪ | ಸಂಗೀತ ಕಚೇರಿ | – | ಕುದುಮಾರು ಸಹೋದರಿಯರಿಂದ |
| ೨೯-೧೧-೮೪ | ದೇವರನಾಮ | – | ಗುಡಿಬಂಡೆ ರಾಮಾಚಾರ್ಯ |
| ೨-೧೨-೮೪ | ಸಂಗೀತ ಕಚೇರಿ | – | ವಿಷ್ಣುಮೂರ್ತಿ ಭಾಗವತ |
| ೪-೧೨-೮೪ | ಕಾವ್ಯವಾಚನ | – | ಎಮ್. ಎಸ್. ಗೋಪಾಲ, ಗಮಕಿ ಮೈಸೂರು |
| ೭-೧೨-೮೪ | ಹಾಡುಗಾರಿಕೆ | – | ಬಿ. ವಿ. ನಾರಾಯಣ ಐತಾಳ |
| ೯-೧೨-೮೪ | ,, | – | ಪ್ರೊ। ರಾಮಮೂರ್ತಿ |
| ೯-೧೨-೮೪ | ,, | – | ಹಿಂದೂಸ್ಥಾನೀ ಸಂಗೀತ - ಅಂಧ ಕಲಾವಿದ<br>ಶಿವರಾಜ ಗವಾಯಿ |
| ೧೦-೧೨-೮೪ | ಭಕ್ತಿ ಸಂಗೀತ | – | ವೇಣುಗೋಪಾಲ ಶಿವಮೊಗ್ಗ |

೧೦-೧೨-೮೪ ಸಂಗೀತ — ನಾಗವಲ್ಲಿ ನಾಗರಾಜ್
೧೧-೧೨-೮೪ ಭಕ್ತಿ ಸಂಗೀತ — ಗೌತಮ್
೧೨-೧೨-೮೪ ಜಲತರಂಗವಾದನ — ಗೋಪಾಲಕೃಷ್ಣ ದೀಕ್ಷಿತರ್
೧೩-೧೨-೮೪ ವೀಣಾವಾದನ — ವೈಣಿಕ ವಿದ್ವಾನ್ ನಾಗರಾಜ್
೧೪-೧೨-೮೪ ಭಕ್ತಿ ಸಂಗೀತ — ಪ್ರಮೀಳಾ ಮತ್ತು ಬಳಗ, ಕುಂದಾಪುರ
೧೧-೧-೮೫ ಹಿಂದೂಸ್ಥಾನೀ ಶಾಸ್ತ್ರೀಯ ಸಂಗೀತ — ಪಂಡಿತ ಶ್ರೀನಿವಾಸ ಶೆಣೈ
೧೩-೧-೮೫ ನಾಗಸ್ವರ ವಾದನ — ಕಾರ್ಕಳ ನಾರಾಯಣ
೧೫-೧-೮೫ ಸಂತವಾಣಿ — ಭೀಮಸೇನ್ ಜೋಶಿ
೧೬-೧-೮೫ ಸಂಗೀತ ಕಚೇರಿ — ಜೇಸುದಾಸ್
೧೯-೧-೮೫ ಹಾಡುಗಾರಿಕೆ — ಬಿ. ವಿ. ರಾಮ್ ಮತ್ತು ಲಕ್ಷ್ಮಣನ್
೨೦-೧-೮೫ ಸಂಗೀತ — ಚಿನ್ನಪ್ಪ
೨೩-೧-೮೫ ” — ಕಾಂಚನ ಸಹೋದರಿಯರಾದ ಕೆ. ವಿ. ವಸಂತ ಪ್ರಭಾ ಮತ್ತು ವಿಜಯಲಕ್ಷ್ಮಿ
೧೨-೨-೮೫ ಸಂಗೀತ ಕಚೇರಿ — ವಿದ್ಯಾರ್ಥಿಗಳಿಂದ
೧೩-೨-೮೫ ವೀಣಾವಾದನ — ವೈಣಿಕ ವಿದ್ವಾನ್ ಸುಬ್ರಹ್ಮಣ್ಯ, ಬೆಂಗಳೂರು
೨-೩-೮೫ ಸಂಗೀತ ಕಚೇರಿ — ಅನ್ನಪೂರ್ಣ ಸಹೋದರಿ
೮-೩-೮೫ ಭಕ್ತಿಗೀತೆ — ಹನುಮಂತಪ್ಪ ಮತ್ತು ಬಳಗ
೧೧-೩-೮೫ ಜಾನಪದ ಗೀತೆ — ರೇವಣಪ್ಪ ಜೋಗಿ ತಿಳುವಳ್ಳಿ
೧೨-೩-೮೫ ದೇವರನಾಮ — ಆರ್. ಶೇಷಗಿರಿದಾಸ್, ಬೆಂಗಳೂರು
೨೧-೩-೮೫ ಸಂಗೀತ ಕಚೇರಿ — ಲಕ್ಷ್ಮಣ ಶಾಸ್ತ್ರಿ, ಬೆಂಗಳೂರು
೨೮-೩-೮೫ ಸಂಗೀತ — ಬಿ.ಕೆ. ಸುಮಿತ್ರ, ಸುಧಾಕರ, ಸೌಮ್ಯ, ಸುನೀತಿ
೨೯-೩-೮೫ ಸೆಕ್ಸೊಫೋನ್ ವಾದನ — ಕದ್ರಿ ಗೋಪಾಲನಾಥ್ ಮತ್ತು ಬಳಗ
೩೦-೩-೮೫ ಭಕ್ತಿ ಸಂಗೀತ — ಸುಬ್ರಹ್ಮಣ್ಯ ಮಠದ ವಿದ್ಯಾಭೂಷಣತೀರ್ಥ ಶ್ರೀಪಾದರಿಂದ
೧-೪-೮೫ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತ — ಶ್ಯಾಮಲಾ ಭಾವೆ
೨೫-೪-೮೫ ವೀಣಾವಾದನ — ಮುಕುಂದ ಮತ್ತು ಬಳಗ
೩೦-೪-೮೫ ಭಕ್ತಿ ಸಂಗೀತ — ಎಡನೀರು ಕೇಶವಾನಂದ ಭಾರತೀ ಶ್ರೀಪಾದರಿಂದ
೧-೫-೮೫ ಹಾಡುಗಾರಿಕೆ — ಕೆ. ಪಾಂಡುರಂಗ ಆಚಾರ್ಯ ಮತ್ತು ಬಳಗ
೨-೫-೮೫ ” — ಬೆಳ್ಳೂರು ಸಹೋದರಿಯರಿಂದ
೩-೫-೮೫ ವೇಣುವಾದನ — ಕೆ. ರಾಘವೇಂದ್ರ ರಾವ್ ಮತ್ತು ಬಳಗ
೪-೫-೮೫ ಸಂಗೀತ ಕಚೇರಿ — ದಾಸಸಂಗೀತ ವಿಶಾರದ ಉಡುಪಿ ವಾಸುದೇವ ಭಟ್

೫-೫-೮೫ ವೀಣಾವಾದನ ಕಚೇರಿ – ಪದ್ಮಭೂಷಣ ದೊರೈಸ್ವಾಮಿ ಅಯ್ಯಂಗಾರ್

೧೯-೫-೮೫ ಅಖಂಡ ಭಜನೆ – ರಾಮನಾಮ ಪ್ರಚಾರಿಣೀ ಮಂಡಳಿ

೨೬-೬-೮೫ ಸಂಗೀತ ಕಚೇರಿ – ಮಾದರಿ ಮಂಗಳಂ ರಾಮಚಂದ್ರನ್

೧-೭-೮೫ ದೇವರನಾಮ – ಟಿ.ಕೆ. ಗೋವಿಂದ ರಾವ್, ಭೀಮ ಭಟ್

೨೧-೭-೮೫ ಹಾಡುಗಾರಿಕೆ – ರಾಮರಾವ್, ಮೈಸೂರು

೨೭-೮-೮೫ ವೀಣಾವಾದನ – ಎರ್ನಾಕುಲಂ ಕುಮಾರಿ ರಾಧಾ ಮತ್ತು ಜಯಶ್ರೀ, ಡಾ! ನಾಗರಾಜ ರಾವ್, ಶ್ರೀಮತಿ ನಾಗರಾಜ ರಾವ್

೬-೯-೮೫ ಭಕ್ತಿ ಸಂಗೀತ – ಶ್ರೀ ವಿದ್ಯಾಭೂಷಣ ತೀರ್ಥರು, ಸುಬ್ರಹ್ಮಣ್ಯ ಮಠ

೭-೯-೮೫ ನಾಗಸ್ವರ ವಾದನ – ದೇವದಾಸ್ ಮತ್ತು ಬಳಗ

'' ಭಜನೆ – ರುಕ್ಮಿಣಿ ಗಿರಿಮಾಜಿ

'' ಕೊಳಲು ವಾದನ – ಡಿಂಡಿಗಲ್ ಎಸ್. ಪಿ. ನಟರಾಜನ್

೯-೯-೮೫ ವೀಣಾವಾದನ – ಶ್ರೀಮತಿ ಅನುರಾಧ ಮಧುಸೂದನ

೧೦-೯-೮೫ ಭಜನೆ – ಪಿ. ವಿ. ಬಾಬು ರಾವ್ ಮತ್ತು ಬಳಗ

೧೦-೯-೮೫ ಸಂಗೀತ – ಎಚ್. ರಾಮಚಂದ್ರ ರಾವ್ ಮತ್ತು ಬಳಗ, ಬೆಂಗಳೂರು

೧೨-೯-೮೫ ಸಂಗೀತ – ಸುಬ್ರಾಯ ಮಾಣಿ ಭಾಗವತರ್

## ಪ್ರವಚನ – ಉಪನ್ಯಾಸ

೧೫-೪-೮೫ ಉಪನ್ಯಾಸ – ಜ್ಞಾನಜ್ಯೋತಿ, ಬೆಂಗಳೂರು

೧೪-೫-೮೪ '' – ಡಾ। ಎಚ್. ಯು. ನಾಗರಾಜ, ಸುಜನಾ ಮೈಸೂರು, ಪ್ರಧಾನ ಗುರುದತ್ತ

೧೫-೫-೮೪ '' – ಇಂದಿರಾ ರಾಮಚಂದ್ರ

೧೬-೫-೮೪ '' – ಬನ್ನಂಜೆ ಗೋವಿಂದಾಚಾರ್ಯ

೩೧-೫-೮೪ ರಿಂದ
೬-೫-೮೪ ಭಾಗವತ ಸಪ್ತಾಹ – ಖೇಡ ಕೃಷ್ಣಾಚಾರ್ಯ

೬-೭-೮೪ ರಿಂದ
೯-೭-೮೪ ಪ್ರವಚನ – ಭೀಮಸೇನ ಆಚಾರ್ಯ, ಬಳ್ಳಾರಿ

೧೦-೮-೮೪ ರಿಂದ
೧೨-೮-೮೪ ವಾಚನ-ಪ್ರವಚನ (ವ್ಯಾಸಭಾರತ) – ಕೋಳ್ಯೂರು ರಾಮಚಂದ್ರ ರಾವ್, ತೆಕ್ಕಟ್ಟೆ ಆನಂದ ಮಾಸ್ಟರ್

೧೪-೮-೮೪ ಉಪನ್ಯಾಸ – ಕೆ. ಆರ್. ಭಾರಧ್ವಾಜ, ಮೈಸೂರು

೧೮-೮-೮೪ ಉಪನ್ಯಾಸ – ಬನ್ನಂಜೆ ಗೋವಿಂದಾಚಾರ್ಯ

೧೯-೮-೮೪ ಉಪನ್ಯಾಸ – ಬನ್ನಂಜೆ ಗೋವಿಂದಾಚಾರ್ಯ

| | | |
|---|---|---|
| ೩-೯-೮೪ | ರಿಂದ | |
| ೯-೯-೮೪ | ಭಾಗವತ ಪ್ರವಚನ | – ಜಯತೀರ್ಥ ಆಚಾರ್ಯ, ಬೆಂಗಳೂರು |
| ೧೧-೯-೮೪ | ರಿಂದ ೧೭-೯-೮೪ " | – ಭಂ. ನಾರಾಯಣ ಆಚಾರ್ಯ |
| ೨೫-೯-೮೪ | ಭಾರತ ವಾಚನ | – ಜಾನಕಿ ಅನಂತಮೂರ್ತಿ, ಶಿವಮೊಗ್ಗ ಲಲಿತಮ್ಮ ನಂಜುಂಡಯ್ಯ |
| ೨೬-೯-೮೪ | ರಿಂದ | |
| ೩೦-೯-೮೪ | ಭಾಗವತವಾಚನ | – ಪ್ರವಚನ ಶ್ರೀ ವಿದ್ಯಾಭೂಷಣತೀರ್ಥ ಶ್ರೀಪಾದರು ಸುಬ್ರಹ್ಮಣ್ಯ ಮಠ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ಪೇಜಾವರ ಮಠ |
| ೧-೧೦-೮೪ | ಉಪನ್ಯಾಸ | – ಡಾ। ಶಿವರಾಮ ಕಾರಂತ, ಖಾದ್ರಿ ಶಾಮಣ್ಣ |
| ೨-೧೦-೮೪ | ಉಪನ್ಯಾಸ | – ಶ್ರೀಪತಿ ತಂತ್ರಿ, ರಾಮದಾಸ್ ಹೊಸಬೆಟ್ಟು ಸೀತಾರಾಮಾಚಾರ್ಯ |
| ೩-೧೦-೮೪ | ರಾಮಾಯಣದ ಬಗ್ಗೆ ವಿಚಾರ ಸಂಕಿರಣ | – ಎಂ. ರಾಜಗೋಪಾಲ ಆಚಾರ್ಯ ಪ್ರಭಂಜನ ವ್ಯಾಸನಕೆರೆ, ಬನ್ನಂಜೆ ಗೋವಿಂದಾಚಾರ್ಯ |
| ೧೦-೧೦-೮೪ | ಉಪನ್ಯಾಸ | – ರಾಘವಾಚಾರ್ಯ, ಮೈಸೂರು |
| ೭-೧೧-೮೪ | ಭಾಗವತ ಪ್ರವಚನ | – ಎಡನೀರು ಶ್ರೀಪಾದರಿಂದ |
| ೧೦-೧೧-೮೪ | ರಿಂದ | |
| ೧೬-೧೧-೮೪ | ಭಾಗವತ ಪ್ರವಚನ | – ಘೂಳಿ ಕೃಷ್ಣಮೂರ್ತಿ ಆಚಾರ್ಯ |
| ೧೬-೧೧-೮೪ | ಭಾಗವತ ಪ್ರವಚನದ ಮಂಗಲೋತ್ಸವ | – ಕೃಷ್ಣಮೂರ್ತಿ ಆಚಾರ್ಯ |
| ೨೫-೧೧-೮೪ | ಉಪನ್ಯಾಸ | – ಶ್ರೀನಿವಾಸ ಆಚಾರ್ಯ, ಮಂಗಳೂರು |
| ೧೨-೧೨-೮೪ | ಧಾರ್ಮಿಕ ಉಪನ್ಯಾಸ | – ಜಗದಾತ್ಮಾನಂದಜೀ |
| ೧೪-೧೨-೮೪ | ರಿಂದ | |
| ೧೮-೧೨-೮೪ | ಧಾರ್ಮಿಕ ಉಪನ್ಯಾಸ | – ಶ್ರೀನಿವಾಸ ಆಚಾರ್ಯ, ಮಂಗಳೂರು |
| ೨೫-೧೨-೮೪ | ರಿಂದ | |
| ೨೮-೧೨-೮೪ | ಕುಮಾರವ್ಯಾಸ ಭಾರತಿ ವಾಚನ ಪ್ರವಚನ | – ಪುತ್ತೂರು ಮಾರ್ಕಂಡೇಯ ಅವಧಾನಿ ಎಚ್. ಆರ್. ಕೇಶವಮೂರ್ತಿ |
| ೧೦-೧-೮೫ | ಉಪನ್ಯಾಸ | – ಶ್ರೀ ಚೈತನ್ಯಪ್ರೇಮ ಸಂಸ್ಥಾನದ ಮಾಧ್ವ ಗೌಡೇಶ್ವರಾಚಾರ್ಯ ಸಂಸ್ಥಾನದ ಪುರುಷೋತ್ತಮ ಗೋಸ್ವಾಮಿ ಮಹಾರಾಜರಿಂದ |
| ೨೪-೧-೮೫ | ಉಪನ್ಯಾಸ | – ಎಚ್. ಎನ್. ಗುರುರಾಜಾಚಾರ್ಯ |
| ೭-೩-೮೫ | ಉಪನ್ಯಾಸ | – ಜಿ. ಪಿ. ರಾಜರತ್ನಂ ಸ್ಮಾರಕ |
| ೧೨-೨-೮೫ | ಉಪನ್ಯಾಸ | – ಸ್ವಾಮಿ ಬ್ರಹ್ಮಾನಂದ |

## ಶ್ರೀ ವಿಶ್ವೇಶತೀರ್ಥರ ಪರ್ಯಾಯ-ನಿತ್ಯೋತ್ಸವ

| | | |
|---|---|---|
| ೧೩-೩-೮೫ | ಭಾಗವತ ಮಂಗಲ | |
| ೨೨-೩-೮೫ | ರಿಂದ | |
| ೨೮-೩-೮೫ | ರಾಮಾಯಣ ಪ್ರವಚನ | – ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯ |
| ೧೨-೪-೮೫ | ಉಪನ್ಯಾಸ | – ಗಲಗಲಿ ಪಂಡರೀನಾಥ ಆಚಾರ್ಯ |
| ೧೩-೪-೮೫ | ಉಪನ್ಯಾಸ | – ಬನ್ನಂಜೆ ಗೋವಿಂದಾಚಾರ್ಯ |
| ೨೩-೪-೮೫ | ಉಪನ್ಯಾಸ | – ವಿಜಯಧ್ವಜತೀರ್ಥರ ಪುಣ್ಯದಿನ |
| ೬-೫-೮೫ | ರಿಂದ | |
| ೧೨-೫-೮೫ | ಭಾಗವತ ಪ್ರವಚನ | – ಬನ್ನಂಜೆ ರಾಘವೇಂದ್ರತೀರ್ಥ ಶ್ರೀಪಾದರಿಂದ |
| ೧೨-೫-೮೫ | ಉಪನ್ಯಾಸ | – ಬೆಂಗಳೂರಿನ ವಿದ್ಯಾಪೀಠದ ವಿದ್ವಾಂಸರಿಂದ |
| ೧೩-೫-೮೫ | ಉಪನ್ಯಾಸ | – ಕೆ. ಟಿ. ಪಾಂಡುರಂಗಿ |
| ೧೪-೫-೮೫ | ರಿಂದ | |
| ೧೬-೫-೮೫ | ವ್ಯಾಸಭಾರತ ಪ್ರವಚನ | – ಕೆ. ಜಿ. ಹಲಸಿಗಿ |
| ೨೦-೫-೮೫ | ರಿಂದ | |
| ೨೫-೫-೮೫ | ಮಹಾಭಾರತ ಪ್ರವಚನ | – ಶ್ರೀ ಪೇಜಾವರ ಶ್ರೀಪಾದರಿಂದ |
| ೨೬-೫-೮೫ | ರಿಂದ | |
| ೩೦-೫-೮೫ | ಧಾರ್ಮಿಕ ಉಪನ್ಯಾಸ | – ಪ್ರಭಂಜನ ವ್ಯಾಸನಕೆರೆ |
| ೩೦-೫-೮೫ | ರಿಂದ | |
| ೩೧-೫-೮೫ | ಉಪನ್ಯಾಸ (ಖಗೋಳ ಶಾಸ್ತ್ರ) | – ಬಾದರಾಯಣಮೂರ್ತಿ, ಬೆಂಗಳೂರು |
| ೧-೬-೮೫ | ಉಪನ್ಯಾಸ | – ಎಂ. ಎನ್. ಶ್ಯಾನುಭೋಗ, ಧಾರವಾಡ |
| ೨೬-೬-೮೫ | ಪ್ರವಚನ | – ಶ್ರೀ ಕೇಶವಾನಂದ ಭಾರತಿ ಸ್ವಾಮೀಜಿ ಎಡನೀರು ಮಠ |
| ೬-೭-೮೫ | ಉಪನ್ಯಾಸ | – ಟೀಕಾಚಾರ್ಯರ ಪುಣ್ಯದಿನ |
| ೯-೭-೮೫ | ರಿಂದ | |
| ೧೭-೭-೮೫ | ಉಪನ್ಯಾಸ | – ಖೇಡ ಕೃಷ್ಣಾಚಾರ್ಯರಿಂದ |
| ೧೯-೭-೮೫ | ರಿಂದ | |
| ೨೫-೭-೮೫ | ಪ್ರವಚನ | – ಕುಷ್ಠಗಿ ಕೃಷ್ಣಮೂರ್ತಿ ಆಚಾರ್ಯ |
| ೧೯-೮-೮೫ | ಉಪನ್ಯಾಸ | – ವಿಶ್ವಹಿಂದೂ ಪರಿಷತ್ |
| ೨-೯-೮೫ | ರಿಂದ | |
| ೮-೯-೮೫ | ವಾಚನ - ಪ್ರವಚನ | – ಸುಬ್ರಹ್ಮಣ್ಯ ಮಠದ ಶ್ರೀ ವಿದ್ಯಾಭೂಷಣತೀರ್ಥರು ಪೇಜಾವರ ಶ್ರೀಪಾದರು |

### ಹರಿಕಥೆ

| | | |
|---|---|---|
| ೧೪-೩-೮೪ | – | ಮೋಹನ್ ರಾವ್, ಉಚ್ಚಿಲ |
| ೨೦-೩-೮೫ | – | ಹಂಡೆಗುರು ವೇದವ್ಯಾಸ |
| ೨೧-೩-೮೪ | – | ಹಂಡೆಗುರು ವೇದವ್ಯಾಸ |

೬-೪-೮೪ – ಶ್ರೀಶದಾಸ್
೬-೫-೮೪ – ಅಚ್ಯುತದಾಸ್, ಬೆಂಗಳೂರು (ಹರಿಕಥಾ ಸಪ್ತಾಹ)
೧೨-೫-೮೪ – ಅಚ್ಯುತದಾಸ್, ಬೆಂಗಳೂರು (ಮಂಗಲ)
೨೨-೫-೮೪ – ಹರಿದಾಸ ಭಟ್ಟ
೩-೬-೮೪ – ಅಂಸಾಳು ಗುರುರಾಜದಾಸ್, ಶಿವಮೊಗ್ಗ
೮-೭-೮೪ – ಅನಂತ ಪದ್ಮನಾಭ ಭಟ್, ಮಂದಾರ್ತಿ
೧೩-೭-೮೪ – ಅನಂತಪದ್ಮನಾಭ, ಕಡೂರು
೧೮-೭-೮೪ – ಶ್ರೀಶದಾಸ್
೨೦-೭-೮೪ – ಹರಿದಾಸ ಕೃಷ್ಣ ಭಟ್, ಸಿದ್ಧಾಪುರ
೮-೮-೮೪ – ಕುಮಾರಿ ನಾಗರತ್ನ
೩೧-೮-೮೪ – ರಾಮದಾಸ ಸಾಮಗ, ಮಲ್ಪೆ
೪-೯-೮೪ – ಪ್ರಹ್ಲಾದ ಆಚಾರ್ಯ, ಚಿಂಚೋಳಿ
೧೩-೯-೮೪ ರಿಂದ
೧೭-೯-೮೪ – ಹರಿಕಥಾ ವಿದ್ವಾನ್ ಶ್ರೀನಿವಾಸದಾಸ್, ಶಿವಮೊಗ್ಗ
೫-೧೦-೮೪ – ಶೇಷಗಿರಿ ರಾವ್, ಕೊಂಡಪಾಡಿ
೧೬-೧೦-೮೪ – ಯೋಗೀಶ ವಿಠಲ ಕಾಮತ್, ಸಾಗರ
೧೭-೧೦-೮೪ – ವೆಂಕಟೇಶದಾಸ್, ತೀರ್ಥಹಳ್ಳಿ
೧೯-೧೧-೮೪ – ವಿನಾಯಕ ಶೆಣೈ
೬-೧೨-೮೪ – ಕುಮಾರಿ ಮಾಲಿನಿ, ಮೈಸೂರು
೧೫-೧೨-೮೪ – ಶಂಕರನಾರಾಯಣ ಸಾಮಗ, ಮಲ್ಪೆ
೧೯-೧೨-೮೪ – ರಾಮ ಆಚಾರ್ಯ
೮-೧-೮೫ ರಿಂದ
೧೨-೧-೮೫ – ಹಂಡೆ ಗುರುವೇದವ್ಯಾಸ್
೧೭-೧-೮೫ – ಭದ್ರಗಿರಿ ಅಚ್ಯುತದಾಸ್
೨೭-೧-೮೫ ರಿಂದ
೩೧-೧-೮೫ – ಸುರತ್ಕಲ್ಲು ಶ್ರೀಧರ ಆಚಾರ್ಯ
೨-೨-೮೫ – ಎನ್. ಆರ್. ಜ್ಞಾನಮೂರ್ತಿ, ಕೋಲಾರ
೩-೨-೮೫ – ಎಂ. ಎನ್. ವೆಂಕಟಾಚಲದಾಸ್, ಬೆಂಗಳೂರು
೪-೨-೮೫ – ಬಸವ ಕುಮಾರ ಶಾಸ್ತ್ರಿ, ಧಾರವಾಡ
೫-೨-೮೫ – ಗುರುರಾಜದಾಸ್, ಮೈಸೂರು
೬-೨-೮೫ – ಲಕ್ಷ್ಮಣದಾಸ್ ವೇಲಂಕಾರ್, ಬೆಂಗಳೂರು
೭-೨-೮೫ – ನೀವಣೆ ಗಣೇಶ ಭಟ್ಟ, ಶಿವಮೊಗ್ಗ
೮-೨-೮೫ ರಿಂದ
೯-೨-೮೫ – ಆರ್. ಗುರುರಾಜ ನಾಯ್ಡು, ಬೆಂಗಳೂರು

೧೦-೨-೮೫ ರಿಂದ
೧೧-೨-೮೫ – ಭದ್ರಗಿರಿ ಅಚ್ಯುತದಾಸ್
೧೭-೨-೮೫ – ಕೆ. ಜಿ. ರಂಗನಾಥದಾಸ್, ಬೆಂಗಳೂರು
೧೨-೩-೮೫ – ಸುಬ್ರಹ್ಮಣ್ಯ ಹರಿದಾಸ್, ಶಿವಮೊಗ್ಗ
೨೮-೩-೮೫ ರಿಂದ
೩೧-೩-೮೫ – ಭದ್ರಗಿರಿ ಅಚ್ಯುತದಾಸ್, ಬೆಂಗಳೂರು
೯-೪-೮೫ ರಿಂದ
೧೧-೪-೮೫ – ವಾದೀಶ ಆಚಾರ್ಯ, ಸುರತ್ಕಲ್
೧೬-೪-೮೫ ರಿಂದ
೨೨-೪-೮೫ – ಗುರುರಾಜದಾಸ್, ಶ್ರೀರಂಗಪಟ್ಟಣ
೭-೫-೮೫ – ಉಮಾದೇವಿ
೧೭-೫-೮೫ – ನವರತ್ನ ಭೀಮಾಚಾರ್ಯ, ಭದ್ರಾವತಿ
೧೦-೬-೮೫ ರಿಂದ
೧೬-೬-೮೫ – ಮಲ್ಪೆ ರಾಮದಾಸ ಸಾಮಗ
೯-೭-೮೫ – ಶ್ರೀಮತಿ ವೀಣಾವತಿ
೭-೮-೮೫ ರಿಂದ
೮-೮-೮೫ – ರಾಘವೇಂದ್ರ ಆಚಾರ್ಯ, ಬೆಂಗಳೂರು
೯-೮-೮೫ ರಿಂದ
೧೬-೮-೮೫ – ಶೇಣಿ ಗೋಪಾಲಕೃಷ್ಣ ಭಟ್
೧೪-೯-೮೫ – ವೆಂಕಟರಮಣದಾಸ್, ಶ್ರೀರಂಗ

## ಯಕ್ಷಗಾನ ಬಯಲಾಟ

೧೮-೩-೮೪ ತ್ರಿಜನ್ಮ ಮೋಕ್ಷ – ಪಾವಂಜೆ ಯಕ್ಷಗಾನ ಕಲಾ ಮಂಡಳಿ
೩೧-೩-೮೪ ಪ್ರತಿಜ್ಞಾ ಪೂರಣ – ಸ್ವರ್ಣಾ ಯಕ್ಷಗಾನ ಕಲಾ ಮಂಡಳಿ, ಮಣಿಪಾಲ
೨-೪-೮೪ ಇಂದ್ರಕೀಲಕ – ಉಡುಪಿ ಆಯುರ್ವೇದ ಕಾಲೇಜಿನ ವಿದ್ಯಾರ್ಥಿಗಳಿಂದ
೪-೪-೮೪ ಚೂಡಾಮಣಿ (ಬೊಂಬೆಯಾಟ) – ಗಣೇಶ ಯಕ್ಷಗಾನ ಕಲಾ ಮಂಡಲಿ, ಉಪ್ಪಿನಕುದ್ರು
೭-೪-೮೪ ಭೀಷ್ಮಪರ್ವ – ಶೇಣಿ, ಪೆರ್ಲ ಮೊದಲಾದ ಕಲಾವಿದರು
೧೦-೪-೮೪ ವಾಲಿವಧೆ – ಯಕ್ಷಮಂಡಲ, ಮಣಿಪಾಲ
೧೩-೪-೮೪ ತೊಗಲು ಬೊಂಬೆಯಾಟ
೧೩-೫-೮೪ ಶ್ರೀಕೃಷ್ಣ ವೈಭವಂ (ಸಂಗೀತ ರೂಪಕ) – ಶ್ರೀಕಂಠನ್ ಮತ್ತು ಬಳಗ
೧೫-೫-೮೪ ರುಕ್ಮಿಣಿ ಪರಿಣಯ (ಕಥಕ್ಕಳಿ ನೃತ್ಯ) – ಕೇರಳ

| | | | |
|---|---|---|---|
| ೨೧-೭-೮೪ | ಕೃಷ್ಣಾರ್ಜುನ | – | ಮಂಗಳೂರು ಯುವಕ ಯಕ್ಷಗಾನ ಕಲಾ ಮಂಡಳಿ |
| ೧-೯-೮೪ | ಯಕ್ಷಗಾನ ಬಯಲಾಟ | – | ಯಕ್ಷಗಾನ ಕಲಾಕ್ಷೇತ್ರ , ಶಿರಿಬೀಡು |
| ೧೦-೯-೮೪ | ಪೌಂಡ್ರಕ ವಧೆ | – | ಯಕ್ಷಭಾರತಿ , ಧರ್ಮಸ್ಥಳ |
| ೨೫-೯-೮೪ | ಯಕ್ಷಗಾನ ಬಯಲಾಟ | – | ವಿದ್ಯಾಪೀಠದ ವಿದ್ಯಾರ್ಥಿಗಳಿಂದ, ಬೆಂಗಳೂರು |
| ೨೬-೫-೮೪ | ಹಂಸ ದಮಯಂತಿ (ಯಕ್ಷಗಾನ ನೃತ್ಯ ರೂಪಕ) | – | ಸಮೂಹ ಕಲಾವಿದರು, ಉಡುಪಿ |
| ೩೦-೯-೮೪ | ಯಕ್ಷಗಾನ ಬಯಲಾಟ | – | ಕಡತೋಕ, ಚಿಪ್ಪಾರು, ಶೇಣಿ, ಕುಂಬಳೆ, ಜೋಶಿ |
| ೨-೧೦-೮೪ | ಕಚದೇವಯಾನಿ | – | ಪೂರ್ಣಪ್ರಜ್ಞ ಕಲಾವಿದರು, ಉಡುಪಿ |
| ೩-೧೦-೮೪ | ಗದಾಯುದ್ಧ | – | ಕೆರೆಮನೆ ಶಂಭು ಹೆಗ್ಡೆ |
| ೬-೧೦-೮೪ | ಗಾನ ನಾಟ್ಯಸುಧಾ ಬಾಲಗಾನ ಮೇಳ, ಕಡಿಯಾಳಿ | | |
| ೧೦-೧೦-೮೪ | ದೇವಯಾನಿ (ತಾಳಮದ್ದಲೆ) ಅನಂತಪದ್ಮನಾಭ ಯಕ್ಷಗಾನ ಸಭೆ | | |
| ೨೫-೧೦-೮೪ | ಮಾಗಧ ವಧೆ | – | ಸಾಲಿಗ್ರಾಮ ಮೇಳ |
| ೨೬-೧೦-೮೪ ರಿಂದ ೩೦-೧೦-೮೪ ರ ವರೆಗೆ | | – | ಮಕ್ಕಳ ಮೇಳ |
| ೨೮-೧೦-೮೪ | ವೀರಗಾಥಾ | – | ಪ್ರಸಿದ್ಧ ಕಲಾವಿದರಿಂದ |
| ೨೨-೧-೮೫ | ಯಕ್ಷಗಾನ ಬಯಲಾಟ | – | ಕಟೀಲು ಮೇಳ |
| ೩-೩-೮೫ | ಯಕ್ಷಗಾನ ಕೂಟ | – | ತಾಳಮದ್ದಲೆ ವೇದಿಕೆ, ಉಡುಪಿ |
| ೩೧-೩-೮೫ | ಯಕ್ಷಗಾನ ಬಯಲಾಟ | – | ಯಕ್ಷರಂಗ , ಉಡುಪಿ |
| ೧-೪-೮೫ | ಯಕ್ಷಗಾನ ಬಯಲಾಟ | – | ಸುಂಕದಕಟ್ಟೆ ಯಕ್ಷಗಾನ ಮಂಡಳಿ, ಬಜ್ಪೆ |
| ೨೪-೪-೮೫ | ಯಕ್ಷಗಾನ ತಾಳಮದ್ದಲೆ | – | ಮಲ್ಪೆ ಶಂಕರನಾರಾಯಣ ಸಾಮಗ ಎಂ. ಆರ್. ಶಾಸ್ತ್ರಿ ,ಶಿವಮೊಗ್ಗ ಮತ್ತು ಬಳಗ |
| ೩-೫-೮೫ | ಶಬರಿ | – | ಯಕ್ಷಗಾನ ನೃತ್ಯರೂಪಕ ಸಮೂಹ , ಉಡುಪಿ |
| ೧೨-೧-೮೫ | ಬಯಲಾಟ | – | ಮುಳಿಯಾರು ಯಕ್ಷಗಾನ ಕಲಾ ಮಂಡಳಿ |
| ೧೮-೫-೮೫ | ಗದಾಯುದ್ಧ | – | ಕಲಾಕಿರಣ, ಉಡುಪಿ |
| ೨೨-೫-೮೫ | ಯಕ್ಷಗಾನ ಬಯಲಾಟ | – | ಕಟೀಲು ಮೇಳ |
| ೨೩-೫-೮೫ | ಯಕ್ಷಗಾನ ಬಯಲಾಟ | – | ವೆಂಕಟರಮಣ ಕೃಪಾಪೋಷಿತ ಯಕ್ಷಗಾನ ಕಲಾ ಮಂಡಳಿ, ಮೂಲ್ಕಿ |
| ೨೫-೫-೮೪ | ಯಕ್ಷಗಾನ ಬಯಲಾಟ | – | ಅಮೃತೇಶ್ವರಿ ಯಕ್ಷಗಾನ ಕಲಾ ಮಂಡಳಿ, ಕೋಟ |
| ೨೬-೫-೮೫ | ಯಕ್ಷಗಾನ ಬಯಲಾಟ (ಇಂಗ್ಲಿಷ್) | – | ಪಿ. ವಿ. ಐತಾಳ್ ಮತ್ತು ಬಳಗ |
| ೧-೭-೮೫ | ಯಕ್ಷಗಾನ ಬಯಲಾಟ | – | ದುರ್ಗಾಪರಮೇಶ್ವರೀ ಯಕ್ಷಗಾನ ಕಲಾ ಮಂಡಳಿ, ವಿಟ್ಲ |

| | | | |
|---|---|---|---|
| ೧೫-೮-೮೫ | ಯಕ್ಷಗಾನ ಬಯಲಾಟ | – | ಹವ್ಯಾಸಿ ಯಕ್ಷರು, ಉಡುಪಿ |
| ೧೪-೯-೮೫ | ಯಕ್ಷಗಾನ ಬಯಲಾಟ | – | ಶ್ರೀನಿವಾಸರಾವ್ ಮತ್ತು ಬಳಗ, ಮಂಗಳೂರು |
| ೧೬-೯-೮೫ | ಯಕ್ಷಗಾನ ಬಯಲಾಟ | – | ಕರ್ನಾಟಕ ಯಕ್ಷಗಾನ ಸಭಾ, ಮಂಗಳೂರು |
| ೨೩-೯-೮೫ | ಮಹಿಳಾ ಯಕ್ಷಗಾನ ಬಯಲಾಟ | – | ರಿಕ್ರಿಯೇಶನ್ ಕ್ಲಬ್ ಸಿಂಡಿಕೇಟ್ ಬ್ಯಾಂಕ್, ಮಣಿಪಾಲ |
| ೨೬-೯-೮೫ | ಯಕ್ಷಗಾನ ಬಯಲಾಟ | – | ಗಣೇಶ ಯಕ್ಷಗಾನ ಮಂಡಳಿ, ಬಂಟ್ವಾಳ |
| ೨೮-೯-೮೫ | ಯಕ್ಷಗಾನ ಬಯಲಾಟ | – | ಕರ್ಕಿ ಹಾಸ್ಯಗಾರ ಯಕ್ಷಗಾನ ಮಂಡಳಿ |
| ೨೦-೧೦-೮೫ | ಯಕ್ಷರೂಪಕ (ಹರಿದಾಸ ವಿಜಯ) | – | ಸಮೂಹ ಕಲಾವಿದರು, ಉಡುಪಿ |
| ೨೧-೧೦-೮೫ | ಯಕ್ಷಗಾನ ಬಯಲಾಟ (ತೆಂಕುತಿಟ್ಟು - ರಾವಣ ವಧೆ) | – | ಪ್ರಸಿದ್ಧ ಕಲಾವಿದರಿಂದ |
| ೨೨-೧೦-೮೫ | ಯಕ್ಷಗಾನ ಬಯಲಾಟ (ಬಡಗು) | – | ಭಸ್ಮಾಸುರ ಮೋಹಿನಿ, ಪ್ರಸಿದ್ಧ ಕಲಾವಿದರಿಂದ |
| ೧೦-೧೧-೮೫ | ಯಕ್ಷಗಾನ ಬಯಲಾಟ (ಭೀಷ್ಮ ವಿಜಯ) | – | ಕೆರೆಮನೆ ಮಹಾಬಲ ಹೆಗ್ಡೆ ಮತ್ತು ಬಳಗ |
| ೨೯-೧೦-೮೫ | ಯಕ್ಷಗಾನ ಬಯಲಾಟ (ಬೇಡರ ಕಣ್ಣಪ್ಪ) | – | ತರುಣವೃಂದ |
| ೧೪-೧೧-೮೫ | ಯಕ್ಷಗಾನ ಬಯಲಾಟ | – | ವಿದ್ಯಾಪೀಠದ ವಿದ್ಯಾರ್ಥಿಗಳಿಂದ, ಬೆಂಗಳೂರು |
| ೧೮-೧೨-೮೫ | ,, | – | ವೇರಿಕಾಯಿ ದಶಾವತಾರ ಮೇಳ, ಬೈಂದೂರು |
| ೨೫-೧೨-೮೫ | ,, | – | ಗುರುರಾಜ ಭಟ್ಟ, ಹುಬ್ಬಳ್ಳಿ, ರಾಮಚಂದ್ರ ಭಟ್ಟ, ಹುಬ್ಬಳ್ಳಿ |
| ೮-೧-೮೬ | ,, | – | ನುರಿತ ಕಲಾವಿದರಿಂದ |
| ೨೨-೧-೮೪ | ,, | – | ಪ್ರಸಿದ್ಧ ಕಲಾವಿದರಿಂದ |

## ಭರತನಾಟ್ಯ ಮತ್ತು ನಾಟಕ ಪ್ರದರ್ಶನ

| | | | |
|---|---|---|---|
| ೧೯-೨-೮೪ | ವೈದೇಹಿ ವಿವಾಹ | – | ನವಚೇತನ ಬೆಂಗಳೂರು (ನೃತ್ಯರೂಪಕ) |
| ೨೬-೩-೮೪ | ಗೀತಗೋವಿಂದ | – | ಆಯುರ್ವೇದ ಕಾಲೇಜಿನ ವಿದ್ಯಾರ್ಥಿನಿಯರಿಂದ (ನೃತ್ಯ ರೂಪಕ) |
| ೩-೪-೮೪ | ಭರತನಾಟ್ಯ | – | ನೃತ್ಯನಿಕೇತನ, ಬೆಳ್ತಂಗಡಿ |
| ೮-೪-೮೪ | ,, | – | ಶ್ರೀಲಲಿತಾ ಕಲಾ ನಿಕೇತನ, ಕುಂದಾಪುರ |
| ೧೬-೫-೮೪ | ,, | – | ಭಾರತೀಯ ನೃತ್ಯ ನಿಲಯ, ಮಡಿಕೇರಿ |
| ೩೧-೫-೮೪ | ಶಬರಿ ಮೋಕ್ಷ, ಕೃಷ್ಣ ದರ್ಶನ | – | ದುರ್ಗ ಗ್ರಾಮದ ಮಕ್ಕಳಿಂದ ನೃತ್ಯರೂಪಕ |
| ೪-೬-೮೪ | ನಾಟಕ (ತಬರನ ಕಥೆ) | – | ಬೆನಕ, ಬೆಂಗಳೂರು |
| ೧೪-೮-೮೪ | ನೃತ್ಯ ಪ್ರದರ್ಶನ | | |

| | | | |
|---|---|---|---|
| ೨೮-೮-೮೫ | ಭರತನಾಟ್ಯ | – | ಮಾಲತಿ ಡೆಮನಿಕ್ |
| ೨-೯-೮೪ | ಸಂಗೀತ ಮತ್ತು ನೃತ್ಯ | – | ಬಾಲಗಾನ ಮೇಳ, ಕಡಿಯಾಳಿ |
| ೨೬-೯-೮೪ | ದಶಾವತಾರ ನೃತ್ಯರೂಪಕ | – | ಪುತ್ತಿಗೆ ಮಠದ ವಿದ್ಯಾರ್ಥಿಗಳಿಂದ |
| ೨೭-೯-೮೪ | ಕಸ್ತಲೆ ರಾಜ್ಯೊಂಟು | – | ದ್ರಾವಿಡ ಬ್ರಾಹ್ಮಣ ಯುವಕ - ಯುವತಿಯರಿಂದ ನಾಟಕ |
| ೨೭-೯-೮೪ | ಭೂಕೈಲಾಸ | – | ದ್ರಾವಿಡ ಬ್ರಾಹ್ಮಣ ಯುವಕ - ಯುವತಿಯರಿಂದ (ನಾಟಕ) |
| ೨೮-೯-೮೪ | ಕೂಚಿಪುಡಿ ನೃತ್ಯ | – | ''ನಾಟ್ಯಕೇಸರಿ'', ''ನಾಟ್ಯ ತಿಲಕ'' ಶ್ರೀ ಕೃಷ್ಣ ಮತ್ತು ಕುಮಾರಿ ಮಹಾಲಕ್ಷ್ಮಿ |
| ೨೯-೯-೮೪ | ಪೃಚ್ಛತ ಭೋಃ ಪೃಚ್ಛತ | – | ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ಯಾರ್ಥಿಗಳಿಂದ ಸಂಸ್ಕೃತ ನಾಟಕ |
| ೨೯-೯-೮೪ | ಕುರುಕ್ಷೇತ್ರ | – | ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ಯಾರ್ಥಿಗಳಿಂದ ಸಂಸ್ಕೃತ ನಾಟಕ |
| ೧-೧೦-೮೪ | ಜನ್ಮಜನ್ಮಾಂತರ | – | ಪೂರ್ಣಪ್ರಜ್ಞ ಕಲಾವಿದರು ಉಡುಪಿ (ನಾಟಕ) |
| ೫-೧೧-೮೪ | ಎನ್ನ ಮುದ್ದಿನ ಮುದ್ದಣ | – | ಕಲಾತರಂಗ ಬೊಂಬ್ಯಾ (ನಾಟಕ) |
| ೧೮-೧೧-೮೪ | ಭರತನಾಟ್ಯ | – | ಪದ್ಮಿನಿ ರಾಮಚಂದ್ರನ್ ಮತ್ತು ಪಾರ್ಟಿ, ಬೆಂಗಳೂರು |
| ೨೫-೧೧-೮೪ | ಭರತನಾಟ್ಯ | – | ಕು। ಶಾರದಾಮಣಿ |
| ೭-೧೨-೮೫ | ಭಾರತೀಯ ನೃತ್ಯ | – | ಕು। ಮಾಲಿನಿ, ಮೈಸೂರು |
| ೧೩-೧-೮೫ | ಆನಂದ ಮುಕುಂದ | – | ಪುತ್ತಿಗೆ ಮಠದ ವಿದ್ಯಾರ್ಥಿಗಳಿಂದ ನೃತ್ಯರೂಪಕ |
| ೧೪-೧-೮೫ | ಭರತನಾಟ್ಯ | – | ಡಾ। ಪದ್ಮಾಸುಬ್ರಹ್ಮಣ್ಯಂ |
| ೨೧-೧-೮೫ | ಭರತನಾಟ್ಯ | – | ಪ್ರಭಾವತಿ ಶಾಸ್ತ್ರಿ |
| ೨೮-೨-೮೫ | ನೃತ್ಯ ಪ್ರದರ್ಶನ | – | ಮದ್ರಾಸಿನ ಕಲಾವಿದೆಯರಿಂದ |
| ೨-೪-೮೫ | ನಾಟಕ | – | ಆಯುರ್ವೇದ ಕಾಲೇಜಿನ ವಿದ್ಯಾರ್ಥಿಗಳಿಂದ |
| ೧೩-೪-೮೫ | ಆನಂದ ಮುಕುಂದ | – | ಪುತ್ತಿಗೆ ಮಠದ ವಿದ್ಯಾರ್ಥಿಗಳಿಂದ (ನೃತ್ಯ ರೂಪಕ) |
| ೨-೫-೮೫ | ಕನಕ ಪುರಂದರ ಕೃಷ್ಣ | – | ಕುಮಾರಿ ಉಮಾರಾವ್ ಮತ್ತು ಬಳಗ (ನೃತ್ಯ ನಾಟಕಾಭಿನಯ) |
| ೫-೫-೮೫ | ಹರಕೆಯ ಕುರಿ | – | ರಂಗಭೂಮಿ ಉಡುಪಿ (ನಾಟಕ) |
| ೮-೬-೮೫ | ಭರತನಾಟ್ಯ | – | ಮಣಿಪಾಲದ ಕಲಾವಿದರಿಂದ |
| ೧೮-೭-೮೫ | ನಾಟಕ | – | ನಂದಿಕೇಶ್ವರ ನಾಟಕ ಸಂಘ |
| ೫-೯-೮೫ | ನೃತ್ಯ | – | ಶಾಂತಿ, ಕಾಂತಿ, ಮಂಗಳೂರು |
| ೨೬-೯-೮೫ | ದಶಾವತಾರ ನೃತ್ಯರೂಪಕ | – | ಪುತ್ತಿಗೆ ಮಠದ ವಿದ್ಯಾರ್ಥಿಗಳಿಂದ |
| ೬-೧೦-೮೫ | ಭರತನಾಟ್ಯ | – | ಉಡುಪಿ ಲಕ್ಷ್ಮೀನಾರಾಯಣ ಮತ್ತು ಬಳಗ ಮದ್ರಾಸ್ |

೧೫-೧೦-೮೫ ನಾಟಕ (ವೀರ ಧನಂಜಯ) – ಪರ್ಯಾಯ ಮಠದವರಿಂದ
೧೬-೧೦-೮೫ ನಾಟಕ (ಬಡಪಾಯಿ ರಾಕ್ಷಸ) – ಪೂರ್ಣಪ್ರಜ್ಞ ಕಲಾವಿದರು
೧೬-೧೦-೮೫ ನಾಟಕ (ದಿವ್ಯದರ್ಶನ) – ಕಲಾಕಿರಣ, ಉಡುಪಿ
೧೭-೧೦-೮೫ ನಾಟಕ (ವೀರ ಅಭಿಮನ್ಯು) – ಕಡಿಯಾಳಿ ಶಾಲೆಯ ಹಳೆ ವಿದ್ಯಾರ್ಥಿಗಳಿಂದ
೧೮-೧೦-೮೫ ನಾಟಕ (ಮೃತ್ಯುಸಿಂಹಾಸನ) – ಹಂಗ್ಲೂರು ಗೆಳೆಯರ ಬಳಗ
೧೯-೧೦-೮೫ ನೃತ್ಯ ರೂಪಕ (ಶ್ರೀ ಮನೋಹರ) – ಸಮೂಹ ಕಲಾವಿದರು
೨೦-೧೦-೮೫ ನೃತ್ಯ ರೂಪಕ (ಸೀತಾ ಕಲ್ಯಾಣ) – ಪೊನ್ನಯ್ಯ ಲಲಿತಕಲಾ ಅಕಾಡೆಮಿ, ಬೆಂಗಳೂರು
೧೫-೧-೮೬ ನೃತ್ಯ ಕಾರ್ಯಕ್ರಮ – ರುಕ್ಮಿಣಿ ಅರುಂಡೇಲು, ಮದ್ರಾಸು
೧೮-೧-೮೬ ನೃತ್ಯ ನಾಟಕ – ರುಕ್ಮಿಣಿ ಅರುಂಡೇಲು, ಮದ್ರಾಸು

## ಸಂಗೀತ ಕಚೇರಿ

೧೫-೯-೮೫ ವಾಯಲಿನ್ ವಾದನ – ಬಿ. ವಾಸುದೇವ ರಾವ್
೨೨-೯-೮೫ ಹಿಂದೂಸ್ಥಾನೀ ಸಂಗೀತ – ಪಂಡಿತ ಶಿವರಾಯ ಗವಾಯಿ, ಶಿವಮೊಗ್ಗ
೨೮-೯-೮೫ ಸಂಗೀತ – ಸುಜಾತಾಬಾಯಿ ಕೃಷ್ಣ
೨೯-೯-೮೫ ಹಾಡುಗಾರಿಕೆ – ಎಂ. ರಾಜಗೋಪಾಲ ಆಚಾರ್ಯ
೧-೧೦-೮೫ ಸಂಗೀತ – ಕೆ. ಮಂಜುಲಾದೇವಿ, ಕೆ. ಮಂಗಳಾದೇವಿ
೧೭-೧೦-೮೫ ಸಂಗೀತ – ಮಧುರೈ ಕೆ. ಎಚ್. ಮಹ್ಮದ್, ಸಂಗೀತ ವಿದ್ವಾನ್
೧೮-೧೦-೮೫ ಸಂಗೀತ-ಹರಿಕತೆ – ಗಾನಕಿರಣ ಸಂಸ್ಥೆ, ಬೆಂಗಳೂರು
೨೩-೧೦-೮೫ ಸಂಗೀತ – ಶ್ರೀಮತಿ ನಾಗವಲ್ಲಿ ನಾಗರಾಜ್, ಬೆಂಗಳೂರು
೨೧-೧೦-೮೫ ನಾಗಸ್ವರ ವಾದನ – ಬಿ. ಎಸ್. ರಾಮ ಮತ್ತು ಬಳಗ, ಶಿವಮೊಗ್ಗ
೨೨-೧೦-೮೫ ಕಾವ್ಯವಾಚನ – ಎಂ. ಎಸ್. ಗೋಪಾಲ್, ಮೈಸೂರು
೨೫-೧೦-೮೫ ದ್ವಂದ್ವ ವಯಲಿನ್ ವಾದನ – ಕೆ. ವಿ. ರಾಜಾ ಅಯ್ಯಂಗಾರ್, ವಾಸುದೇವ ಭಟ್ಟ
೪-೧೧-೮೫ ಸಂಗೀತ ಕಚೇರಿ – ಭಾರ್ಗವಿ ಆಚಾರ್
೫-೧೧-೮೫ ದ್ವಂದ್ವ ಗಾಯನ – ಡಾ| ವಿಜಯ ಮತ್ತು ಡಾ| ಲಲಿತ
೯-೧೧-೮೫ ಭಕ್ತಿ ಗೀತೆ – ಉಮೇಶಚಂದ್ರ
೧೦-೧೧-೮೫ ದ್ವಂದ್ವ ಹಾಡುಗಾರಿಕೆ – ರವಿರಾಜ ಉಪಾಧ್ಯ, ನಾಗರಾಜ ಉಪಾಧ್ಯ
೧೩-೧೧-೮೫ ವೀಣಾವಾದನ – ಬಿ. ಯಸ್. ಅನಂತರಾಮನ್, ಶಿವಮೊಗ್ಗ
೧೪-೧೧-೮೫ ವೀಣಾವಾದನ – ಕುಮಾರಿ ಮಂಗಳಾ ರಾಮನ್
೨೪-೧೧-೮೫ ಸೆಕ್ಸೋಫೋನ್ ವಾದನ – ವೆಂಕಟಪ್ಪ ಡೋಗ್ರಿ
೨೫-೧೧-೮೫ ಸೆಕ್ಸೋಫೋನ್ ವಾದನ – ಯು. ರಾಘವ ಸೇರಿಗಾರ
೨೭-೧೧-೮೫ ಸೆಕ್ಸೋಫೋನ್ ವಾದನ – ಗೋಪಾಲಕೃಷ್ಣ, ಮೂಡಬಿದಿರೆ
೩೦-೧೧-೮೫ ಸಂಗೀತ – ಸರೋಜಾ ಸೌಂದರ್ಯ ರಾಜನ್
೧-೧೨-೮೫ ’’ – ಪಿ. ಜಿ. ಬಾಲಸುಬ್ರಹ್ಮಣ್ಯಂ ಮತ್ತು ಬಳಗ
೬-೧೨-೮೫ ’’ – ಮಾಧವಿ
೮-೧೨-೮೫ ಭಕ್ತಿಗೀತೆ – ಸಿದ್ಧರಾಮ ಜಂಬುಲ್ವನ್ನಿ

| | | | |
|---|---|---|---|
| ೧೨-೧೨-೮೫ | ಹಾಡುಗಾರಿಕೆ | – | ಚೇತನಾ ಆಚಾರ್ ಮತ್ತು ಸವಿತಾ ಆಚಾರ್ |
| ೧೩-೧೨-೮೫ | ಸಂಗೀತ ಕಚೇರಿ | – | ಕೃಷ್ಣಮೂರ್ತಿ ಸುಲೋಚನ |
| ೧೫-೧೨-೮೫ | ವೀಣಾವಾದನ | – | ಅರುಣಕುಮಾರಿ ವಿ. ಎಸ್. |
| ೧೬-೧೨-೮೫ | ಸಂಗೀತ ಕಚೇರಿ | – | ಉಮ ಮತ್ತು ಉಷಾ ಕೋಲಾರ |
| ೧೬-೧೨-೮೫ | ,, | – | ಕುದ್ಮಾಕಿ ಎಸ್. ಪ್ರಭಾವತಿ, ಕುದ್ಮಾಕಿ ಎಸ್. ವಲ್ಲಿ |
| ೧೭-೧೨-೮೫ | ಸಂಗೀತ | – | ಕ್ಷಮ ಗೋವಿಂದ ರಾವ್ |
| ೧೮-೧೨-೮೫ | ವೀಣಾವಾದನ | – | ಶ್ರೀಮತಿ ಶಾಂತಿ, ಬೆಂಗಳೂರು |
| ೫-೧೧-೮೬ | ಸಂಗೀತ (ರಸಮಂಜರಿ) | – | ಅನಂತನಾಗ್ ಮತ್ತು ಬಳಗ |
| ೩-೧-೮೬ | ಸಂಗೀತ | – | ಮಡಿಕೇರಿ ಸಹೋದರಿಯರು |
| ೧೬-೧-೮೬ | ಪಿಟೀಲು | – | ಕುನ್ನಕುಡಿ ವೈದ್ಯನಾಥನ್ |

## ಪ್ರವಚನ ಮತ್ತು ಉಪನ್ಯಾಸ

| | | | |
|---|---|---|---|
| ೨೨-೯-೮೫ | ಉಪನ್ಯಾಸ | – | ನಾಗೇಂದ್ರ ಆಚಾರ್ಯ |
| ೨-೧೦-೮೫ ರಿಂದ | | | |
| ೬-೧೦-೮೫ | ಭಾಗವತ ಸಾರೋದ್ಧಾರ ಉಪನ್ಯಾಸ | – | ಮಧ್ವಾಚಾರ್ಯ ಮೊಕಾಶಿ ಬಿಜಾಪುರ |
| ೭-೧೦-೮೫ ರಿಂದ | | | |
| ೧೩-೧೦-೮೫ | ಮಹಾಭಾರತದ ಬಗ್ಗೆ ಉಪನ್ಯಾಸ | – | ಜಯತೀರ್ಥ ಆಚಾರ್ಯ, ಮಳಗಿ |
| ೨೭-೧೦-೮೫ | ಉಪನ್ಯಾಸ | – | ಸಿ. ಆರ್. ಗುರುರಾಜ ರಾವ್, ಶೇಷಗಿರಿ ರಾವ್ |
| ೧೬-೧-೮೫ ರಿಂದ ೨೨-೧೧-೮೫ | ಪ್ರವಚನ | – | ಪಾಂಡುರಂಗಿ ಗುರುರಾಜ ಆಚಾರ್ಯ |
| ೧೯-೧೧-೮೫ | ಉಪನ್ಯಾಸ | – | ಸಚ್ಚಿದಾನಂದ ಗಣಪತಿ ಸ್ವಾಮಿ |
| ೩-೨-೮೫ | ಪುರಾಣ ಪ್ರವಚನ | – | ಗಣಪತಿ ಶರ್ಮ |
| ೪-೧೨-೮೫ | ಗಮಕ ಪ್ರವಚನ | – | ಪಿ. ಎಸ್. ವಾಸುದೇವ ರಾವ್, ಎಚ್. ಸೀತಾರಾಮ ಆಚಾರ್ಯ |
| ೮-೧೨-೮೫ ರಿಂದ ೧೧-೧೨-೮೫ | ಪ್ರವಚನ | – | ಕೇಪ್ಪರ ನರಸಿಂಹ ಆಚಾರ್ಯ |
| ೯-೧೨-೮೫ ರಿಂದ ೨೫-೧೨-೮೫ | ಪ್ರವಚನ | – | ಉಮರ್ಜಿ ಶ್ರೀನಿವಾಸ ಆಚಾರ್ಯ |
| ೨೬-೧೨-೮೫ ರಿಂದ ೩೦-೧೨-೮೫ | ಪ್ರವಚನ | – | ಪಾತಾಪುರ ಕೃಷ್ಣಮೂರ್ತಿ ಆಚಾರ್ಯ |
| ೨೯-೧೨-೮೫ | ಉಪನ್ಯಾಸ | – | ಗೋಪಾಲಕೃಷ್ಣ ಅಡಿಗ |
| ೫-೧-೮೬ ರಿಂದ ೧೧-೧-೮೬ | ಪ್ರವಚನ | – | ಗಲಗಲಿ ಪಂಡರೀನಾಥ ಆಚಾರ್ಯ |

## ಕೃಷ್ಣಾನುಗ್ರಹ ಪ್ರಶಸ್ತಿ ಪ್ರದಾನ

೧೮-೧-೮೪ ರಾಮಕೃಷ್ಣ ಹೆಗಡೆ, ಜನಾರ್ದನ ಪೂಜಾರಿ, ರಾಜ್‌ಕುಮಾರ್, ವೀರೇಂದ್ರ ಹೆಗ್ಗಡೆ

೧೪-೧೧-೮೪ ನಾಗರಾಜ ರಾವ್, ಮದ್ರಾಸು

೧-೧೨-೮೪ ಕೆ. ಸದಾನಂದ ಶೆಟ್ಟಿ, ಅಧ್ಯಕ್ಷ, ವಿಜಯಾ ಬ್ಯಾಂಕ್

೮-೧೨-೮೪ ವೈ.ಎಸ್. ಹೆಗ್ಡೆ, ಅಧ್ಯಕ್ಷ, ಕಾರ್ಪೊರೇಶನ್ ಬ್ಯಾಂಕ್

೩೦-೧೨-೮೪ ರಘುರಾಮ ರಾವ್, ಅಧ್ಯಕ್ಷ, ಕರ್ಣಾಟಕ ಬ್ಯಾಂಕ್
೩-೪-೮೫ ಎ. ಯನ್. ಬ್ಯಾನರ್ಜಿ, ಕರ್ನಾಟಕ ರಾಜ್ಯಪಾಲರು
೧೫-೪-೮೫ ಪಿ. ಶ್ರೀಪತಿ ಆಚಾರ್ಯ
೨೨-೫-೮೫ ಬಾಲಕೃಷ್ಣ ಕುಬಣೂರು
೪-೬-೮೫ ಡಾ। ವೆಂಕಟರಾವ್, ಮದ್ರಾಸು
೨೧-೬-೮೫ ಜಸ್ಟೀಸ್ ಸುಬ್ರಹ್ಮಣ್ಯಂ ಪೋತಿ
೨-೮-೮೫ ಬಿ. ಎ. ದೇಸಾಯಿ, ಹುಬ್ಬಳ್ಳಿ
೧೬-೯-೮೫ ಸೂರ್ಯನಾರಾಯಣ ಅಡಿಗ, ಕೆ. ಕೆ. ಪೈ.
೧೫-೧೦-೮೫ ಕಲ್ಬಾವಿ ವೆಂಕಟ ರಾವ್, ಮಧುಸೂದನ ಡಿ. ಕುಶೆ, ಬಿ. ಗಣಪತಿ ಪೈ,
ದಾಮೋದರ ಆರ್. ಸುವರ್ಣ, ಪದ್ಮನಾಭ ಮಂಜ.
೧೬-೧೦-೮೫ ಭೂಗರ್ಭ ವಿಜ್ಞಾನಿ ಯಸ್. ಆರ್. ರಾವ್
೨೮-೧೦-೮೫ ನಾಗಪ್ಪ ಆಳ್ವ
೩೦-೧೦-೮೫ ಬಾಳಾ ಸಾಹೇಬ ದೇವರಸ್
೫-೧೧-೮೫ ಆಸ್ಕರ್ ಫೆರ್ನಾಂಡೀಸ್
೨೪-೧೧-೮೫ ಬಸವರಾಜ, ಬೆಂಗಳೂರು
೨೫-೧೧-೮೫ ಬಿ. ಎನ್. ವಾಸುದೇವ ರಾವ್, ಬೆಂಗಳೂರು
೨-೧೨-೮೫ ಕೆ. ಎಸ್. ಹೆಗ್ಡೆ
೭-೧೨-೮೫ ಉಪರಾಷ್ಟ್ರಪತಿ ಆರ್. ವೆಂಕಟ್ರಾಮನ್
೧೦-೧೨-೮೫ ಬಳ್ಳಾರಿ ಶ್ರೀನಿವಾಸ ಆಚಾರ್ಯ
೨೪-೧೨-೮೫ ಗುರುರಾಜ ಭಟ್ಟ ಹುಬ್ಬಳ್ಳಿ, ರಾಮಚಂದ್ರ ಹುಬ್ಬಳ್ಳಿ
೨೫-೧೨-೮೫ ಪ್ರೊ। ಸಿ. ಎನ್. ಆರ್. ರಾವ್
೪-೧-೮೬ ಮೈಸೂರು ಶಿಲ್ಪಿ ಶ್ರೀನಿವಾಸ ಆಚಾರ್
೧೩-೧-೮೬ ವರದರಾಜ ಆದ್ಯ

## ಸನ್ಮಾನ

೫-೫-೮೪ ಬಿ. ವಿ. ರಾಮನ್ (ಜ್ಯೋತಿಷಿ)
೬-೫-೮೪ ಕುಮಾರಿ ರಶ್ಮಿ ಬೆಜವಾಡ
೨೦-೫-೮೪ ಪ್ರೊ। ವಿ. ಎಂ. ಇನಾಂದಾರ
೨೩-೫-೮೪ ಶೃಂಗೇರಿ ಭಾರತೀತೀರ್ಥ ಶ್ರೀಪಾದರಿಗೆ
೫-೭-೮೪ ಸುಬ್ರಹ್ಮಣ್ಯ, ಎಡನೀರು, ಬೇಲಿಮಠ, ಚಾರುಕೀರ್ತಿ, ಬಾಳೆಕುದ್ರು ಮಠದವರಿಗೆ
೨೬-೭-೮೪ ಚಲಚ್ಚಿತ್ರ ನಟ ಶ್ರೀನಾಥ (ಜ್ಞಾನಜ್ಯೋತಿ ಕಲಾಮಂದಿರ)
೨೭-೭-೮೪ ರಾಜಾ ಎಸ್. ಗುರುರಾಜಾಚಾರ್ಯ, ವೆಂಕೋಬರಾವ್, ಅಶ್ವತ್ಥ ನಾರಾಯಣ, ರಿತ್ತಿ,
ವೆಂಕಣ್ಣಾಚಾರ್ಯ
೫-೮-೮೪ ಎ. ಕೃಷ್ಣ ರಾವ್
೨೯-೮-೮೪ ಅಮರನಾಥ ಶೆಟ್ಟಿ

೨-೯-೮೪ ಭದ್ರಗಿರಿ ಅಚ್ಚುತದಾಸ್
೯-೯-೮೪ ಚಲಚಿತ್ರನಟ ಬಾಲಕೃಷ್ಣ
೭-೧೨-೮೪ ಶಿಲ್ಪಸಿದ್ಧಾಂತಿ ಶ್ರೀ ಮಹಾದೇವ ಸ್ವಾಮಿಗಳವರಿಗೆ
೯-೧೨-೮೪ ಟಿ. ರಮೇಶ ಯು. ಪೈ, ಮಣಿಪಾಲ
೧೯-೧-೮೫ ಕೆ. ಹರಿದಾಸ ಉಪಾಧ್ಯಾಯ
೧೪-೨-೮೫ ಮಾಧವ ಆಚಾರ್ಯ, ಮದ್ರಾಸ್

## ಇತರ ಕಾರ್ಯಕ್ರಮಗಳು :

| | | | |
|---|---|---|---|
| ೨೦-೫-೮೪ | ಅರ್ಚಕರ ಸಮ್ಮೇಳನ | | |
| ೩೦-೫-೮೪ | ವಸಂತ ಸಾಹಿತ್ಯೋತ್ಸವ | | |
| ೯-೬-೮೪ | ಪುರಾಣ ಮಂಗಲೋತ್ಸವ | – | ಖೇಡ ಕೃಷ್ಣ ಆಚಾರ್ಯ |
| ೩೧-೭-೮೪ | ಚಲಚಿತ್ರ ಪ್ರದರ್ಶನ | | |
| ೧೭-೮-೮೪ | ವಿಚಾರ ಗೋಷ್ಠಿ<br>ಯಕ್ಷಗಾನದಲ್ಲಿ ಶ್ರೀಕೃಷ್ಣ | – | ಶೇಣಿ ಗೋಪಾಲಕೃಷ್ಣ ಭಟ್<br>ಕೆರೆಮನೆ ಮಹಾಬಲ ಹೆಗ್ಡೆ, ಮಲ್ಪೆ<br>ರಾಮದಾಸ ಸಾಮಗ |
| ೯-೯-೮೪ | ಪುರಾಣ ಮಂಗಲೋತ್ಸವ | – | ಜಯತೀರ್ಥ ಆಚಾರ್ಯ |
| ೯-೯-೮೪ | ಯೋಗಾಸನ ಪ್ರದರ್ಶನ | – | ರಘುರಾಮಭಟ್, ಕುಮಟಾ |
| ೨೨-೯-೮೪ | ಜೋಗಿ ಕಥೆ | – | ಗುಂಡಪ್ಪ ವಿಶ್ವಪ್ಪ ತಿಳುವಳ್ಳಿ |
| ೪-೧೦-೮೪ | ಮಧ್ವ ಜಯಂತಿ<br>ಕಾರ್ಯಕ್ರಮ | – | ಪ್ರಭಂಜನ ವ್ಯಾಸನಕೆರೆ, ಬನ್ನಂಜೆ<br>ಗೋವಿಂದಾಚಾರ್ಯ |
| ೧೨-೧೦-೮೪ | ಸ್ವಾಗತ ಸಮಾರಂಭ | – | ಹುಬ್ಬಳ್ಳಿ ಮೂರು ಸಾವಿರ ಮಠದ<br>ಶ್ರೀಪಾದಂಗಳವರಿಗೆ |
| ೧೩-೧೦-೮೪ ರಿಂದ | | | |
| ೧೪-೧೦-೮೪ | ಮಹಾಸಭೆ | – | ವಿಶ್ವ ಹಿಂದೂ ಪರಿಷತ್ತು |
| ೪-೧೧-೮೪ | ಪ್ರಾಣವೀಣೆ | – | ಹರಿದಾಸ ನಿತ್ಯಾನಂದ, ಬೋಳೂರು |
| ೮-೧೧-೮೪ | ಸ್ವಾಗತ ಸಮಾರಂಭ | – | ಎಡನೀರಿನ ಶ್ರೀ ಕೇಶವಾನಂದ ಭಾರತೀ<br>ಸ್ವಾಮಿಗಳಿಗೆ |
| ೧೧-೧-೮೫ | ಮಿಮಿಕ್ರಿ | – | ಚಲಚಿತ್ರ ನಟ ವಿಕಟನ್ ಗಣೇಶನ್ |
| ೯-೩-೮೫ | ಸಭಾ ಕಾರ್ಯಕ್ರಮ | – | ವಾದಿರಾಜರ ಪುಣ್ಯದಿನ |
| ೧೦-೩-೮೫ | ಸಭಾ ಕಾರ್ಯಕ್ರಮ | – | ವ್ಯಾಸರಾಯರ ಪುಣ್ಯದಿನ |
| ೪-೭-೮೫ | ಆನಂದ ಮುಕುಂದ ಕ್ಯಾಸೆಟ್ ಬಿಡುಗಡೆ | | |
| ೨೬-೭-೮೫ | ಮನೋರಂಜನಾ<br>ಕಾರ್ಯಕ್ರಮ | – | ಮುಕುಂದಕೃಪಾದ ಮಕ್ಕಳಿಂದ |
| ೨೬-೮-೮೫ | ಜನ್ಮಶತಾಬ್ದ ಕಾರ್ಯಕ್ರಮ | – | ದಿ। ಕಡೆಕಾರು ರಾಜಗೋಪಾಲ ಆಚಾರ್ಯ |
| ೭-೯-೮೫ | ಕ್ಯಾಸೆಟ್ ಬಿಡುಗಡೆ | – | ಜನಾರ್ದನ ಮತ್ತು ರಾಮಚಂದ್ರ ಸೆಕ್ಸೋಫೋನ್ |

| | | | |
|---|---|---|---|
| ೧೩-೯-೮೫ | ಸಭಾ ಕಾರ್ಯಕ್ರಮ | – | ಜೇಸೀಸ್, ಉಡುಪಿ |
| ೨೧-೧೦-೮೫ ರಿಂದ | | | |
| ೨೨-೧೦-೮೫ | ಧರ್ಮ ಸಾಹಿತ್ಯಗೋಷ್ಠಿ | – | ಎಸ್. ಎಲ್. ಭೈರಪ್ಪ, ಜಿ. ಕೆ. ಗೋವಿಂದ ರಾವ್ |
| ೨೩-೧೦-೮೫ | ಮಧ್ವ ಜಯಂತೀ ಮಹೋತ್ಸವ | – | ಬನ್ನಂಜೆ ಗೋವಿಂದಾಚಾರ್ಯ |
| ೩೧-೧೦-೮೫ ರಿಂದ | | | |
| ೧-೧೧-೮೫ | | – | ಧರ್ಮ ಸಂಸದ್ ದ್ವಿತೀಯ ಮಹಾಧಿವೇಶನ |
| ೫-೧೨-೮೫ | ಸ್ವಾಗತ | – | ತೋಂಟದಾರ್ಯ ಮಠದ ಸ್ವಾಮಿಗಳಿಗೆ |
| ೨೬-೧೨-೮೫ | ನಾಗಮಂಡಲ | | |
| ೨೮-೧೨-೮೫ | ಸ್ವಾಗತ ಸಮಾರಂಭ | – | ರಾಮಚಂದ್ರಪುರ ಮಠದ ಶ್ರೀಗಳವರಿಗೆ |
| ೩೧-೧೨-೮೫ | ಸ್ವಾಗತ ಸಮಾರಂಭ | – | ಡಾ। ಯು. ಆರ್. ಅನಂತಮೂರ್ತಿ, ಬಾಳೆಕುದ್ರು ಶ್ರೀಗಳವರಿಗೆ |
| ೫-೧೦-೮೫ | ಮಿಮಿಕ್ರಿ | – | ಟಿ. ರಾಮಚಂದ್ರ ಭಟ್ಟ |
| ೧೯-೧೦-೮೫ ರಿಂದ | | | |
| ೨೦-೧೦-೮೫ | ದಾಸ ಸಾಹಿತ್ಯ ಗೋಷ್ಠಿ | – | ಹಂಪ ನಾಗರಾಜಯ್ಯ, ಕೆ. ಎಸ್. ನರಸಿಂಹ ಸ್ವಾಮಿ |

(ಪೇಜಾವರ ಶ್ರೀಗಳವರ ಈ ಬಾರಿಯ ಪರ್ಯಾಯಾವಸರದ ಎರಡು ವರ್ಷಗಳ ೭೩೦ ದಿನಗಳಲ್ಲಿ ಅನುದಿನವೂ ಒಂದಲ್ಲ ಒಂದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಸತ್ಕಾರ್ಯಕ್ರಮಗಳು ಜರಗುತ್ತಾ ಬಂದುದು ಗಮನಾರ್ಹ. ವರ್ಷವಿಡೀ ದಿನಂಪ್ರತಿ ನೆರವೇರಿದ ಈ ಸತ್ಕಾರ್ಯದಲ್ಲಿ ಇನ್ನಿತರರು ಭಾಗವಹಿಸದ ಬಿಡುವಿದ್ದ ನಡುವಿನ ದಿನಗಳಲ್ಲಿ ಪರ್ಯಾಯ ಪೀಠಾಧೀಶ ಶ್ರೀಗಳವರೇ ಇಡೀ ರಾಮಾಯಣ, ಭಾರತ, ಭಾಗವತ ಹಾಗೂ ಗೀತೆಯ ಕುರಿತಾಗಿ ಪ್ರವಚನವನ್ನು ಅನುಕ್ರಮವಾಗಿ ಗೈದಿರುವುದು ಮಹತ್ತ್ವಪೂರ್ಣ).

**('ಗೌರವ' ಸಂ. – ಕೊಡತ್ತೂರು ಅನಂತಪದ್ಮನಾಭ ಉಡುಪ, ಕಿನ್ನಿಗೋಳಿ ೧೯೮೬)**

●

ಅಕ್ಕಿಮುಹೂರ್ತ ಸಂಭ್ರಮ – ಶ್ರೀ ವಿಶ್ವೇಶತೀರ್ಥರ ಮೂರನೆಯ ಪರ್ಯಾಯ ೧೯೮೪



ಪರ್ಯಾಯ ಮೆರವಣಿಗೆಯಲ್ಲಿ ಶ್ರೀ ವಿಶ್ವೇಶತೀರ್ಥರು

ಅಕ್ಕಿಮುಹೂರ್ತ ಸಂಭ್ರಮ – ಶ್ರೀ ವಿಶ್ವೇಶತೀರ್ಥರ ಮೂರನೆಯ ಪರ್ಯಾಯ ೧೯೬೮



ಪರ್ಯಾಯ ಮೆರವಣಿಗೆಯಲ್ಲಿ ಶ್ರೀ ವಿಶ್ವೇಶತೀರ್ಥರು



ಕನಕನ ಕಿಂಡಿಯಲ್ಲಿ ಕೃಷ್ಣದರ್ಶನ



ತೃತೀಯ ಪರ್ಯಾಯ ದರ್ಬಾರಿನಲ್ಲಿ ವರನಟ ಡಾ। ರಾಜ್‌ಕುಮಾರ್‌ರಿಗೆ ಸಂಮಾನ

ಪರ್ಯಾಯ ದರ್ಬಾರಿನಲ್ಲಿ ಶ್ರೀ ವಿಷ್ಣುಮೂರ್ತಿ ಎರ್ಕಾಡಿತ್ತಾಯ – ಅಧ್ಯಕ್ಷರು ಇಂಡಿಯನ್ ಓವರ್‌ಸೀಸ್ ಬ್ಯಾಂಕ್ – ಅವರಿಗೆ ಸಂಮಾನ

ಡಾ। ಕೋಟ ಶಿವರಾಮ ಕಾರಂತರಿಗೆ ಸಂಮಾನ

ಪರ್ಯಾಯ ಕಾಲದ ಸಾಹಿತ್ಯ ಸಮಾರಂಭ ಒಂದರಲ್ಲಿ ಶ್ರೀ ಕೆ. ಎಸ್. ನರಸಿಂಹ ಸ್ವಾಮಿ, ಪ್ರೊ। ಕು. ಶಿ. ಹರಿದಾಸ ಭಟ್ಟ,
ಡಾ. ಹಂಪನಾ

ಶ್ರೀ ಸೂರ್ಯನಾರಾಯಣ ಅಡಿಗರಿಗೆ ಕೃಷ್ಣಾನುಗ್ರಹ ಪ್ರಶಸ್ತಿ

ಶ್ರೀ ಕೆ. ಕೆ. ಪೈ ಅವರಿಗೆ ಶ್ರೀ ಕೃಷ್ಣಾನುಗ್ರಹ ಪ್ರಶಸ್ತಿ

ನೃತ್ಯವಿಶಾರದೆ ಡಾ। ಪದ್ಮಾ ಸುಬ್ರಹ್ಮಣ್ಯಂ ಅವರಿಗೆ ಸಂಮಾನ

ಶೃಂಗೇರಿ ಜಗದ್ಗುರು ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಮಹಾಸನ್ನಿಧಾನಂಗಳವರೊಂದಿಗೆ

ಸ್ವಾಮೀ ಚಿನ್ಮಯಾನಂದಜೀ ಮತ್ತು ಶ್ರೀ ಸತ್ಯಸಾಯಿಬಾಬಾ ಅವರೊಂದಿಗೆ

ಶೃಂಗೇರಿ ಜಗದ್ಗುರು ಶ್ರೀ ಶ್ರೀ ಅಭಿನವ ವಿದ್ಯಾತೀರ್ಥರು ಮತ್ತು ಪಲಿಮಾರು ಮಠದ ಶ್ರೀ ವಿದ್ಯಾಮಾನ್ಯತೀರ್ಥರೊಂದಿಗೆ

ಕಾಂಚೀ ಶ್ರೀ ವಿಜಯೇಂದ್ರ ಸರಸ್ವತೀ ಸ್ವಾಮೀಜಿ ಮತ್ತು ಬಾಳೆಕುದುರು ಮಠದ ಶ್ರೀ ಶಂಕರಾಶ್ರಮ ಸ್ವಾಮೀಜಿ
ಅವರೊಂದಿಗೆ



ದಕ್ಷಿಣಾಮ್ನಾಯ ಶೃಂಗೇರಿ ಮಠದ ಶ್ರೀ ಶ್ರೀ ಭಾರತೀತೀರ್ಥ ಮಹಾಸನ್ನಿಧಾನಂಗಳವರೊಂದಿಗೆ

ಉತ್ತರಾದಿಮಠದ ಶ್ರೀ ಶ್ರೀ ಸತ್ಯಪ್ರಮೋದತೀರ್ಥರೊಂದಿಗೆ

ಧರ್ಮಸ್ಥಳದಲ್ಲಿ ನಡೆದ ಧರ್ಮ ಸಂಸತ್ತಿನಲ್ಲಿ ಪರಮಪೂಜ್ಯ ಜೈನ ಮುನಿ ಏಲಾಚಾರ್ಯರೊಂದಿಗೆ



ಹರೇಕೃಷ್ಣ ಪಂಥದವರೊಂದಿಗೆ ಶ್ರೀ ವಿಶ್ವೇಶತೀರ್ಥರು

ಶ್ರೀ ವಿಬುಧೇಶತೀರ್ಥರೊಂದಿಗೆ ಶ್ರೀ ವಿಶ್ವೇಶತೀರ್ಥರು



ಶ್ರೀ ವಿಬುಧೇಶತೀರ್ಥರಿಗೆ ಶ್ರೀ ವಿಶ್ವೇಶತೀರ್ಥರಿಂದ ಗೌರವ

